

# ರಾಷ್ಟ್ರೀಯ ಮಹಾಪುರುಷರು



ಲೇಖಕರು :

ಅನಂತ ಕುಲಕರ್ಣಿ, ಬಿ. ಎ. (ಆನರ್ಸ)

ಶಿಕ್ಷಕರು ಹಾಯಸ್ಕೂಲ ರೋಣ



೧೯೫೧

ಬೆಲೆ ] [ ೧೨ ಆಣೆ

# ಮುನ್ನುಡಿ



ಮಹಾ ಪುರುಷರ ಜೀವನವನ್ನು ಮಹಾಸಾಗರಕ್ಕೆ ಹೋಲಿಸಬಹುದು ಅಂಥವರ ಜೀವನವನ್ನು ಒಂದೆರಡು ಪುಟಗಳಲ್ಲಿ ಮಾಡಿಕೊಡುವದು ಸಾಹಸದ ಕೆಲಸ. ಈ ಪುಸ್ತಕದಲ್ಲಿ ರಾಜಕೀಯ ಮುಖಂಡರೂ, ಮಹರ್ಷಿಗಳೂ ಸಮಾಜಸುಧಾರಕರೂ, ತತ್ವಜ್ಞಾನಿಗಳೂ ಇವರೆಲ್ಲರ ಜೀವನ ಪರಿಚಯವು ಸಂಕ್ಷಿಪ್ತವಾಗಿ ಬಂದಿದೆ. ಹೆಚ್ಚು ವಿಸ್ತಾರವಾಗಿ ಇವರ ಜೀವನ ಪರಿಚಯ ಮಾಡಿಕೊಡಬೇಕೆಂದು ಮನಸ್ಸಿತ್ತು. ಆದರೆ ಸ್ಥಳಾವಕಾಶವು ತೀರ ಸ್ವಲ್ಪವಾಗಿರುವದರಿಂದ ಅದು ಸಾಧ್ಯವಾಗಲಿಲ್ಲ. ಮಹಾ ಪುರುಷರ ಜೀವನ ಚರಿತ್ರೆಗಳನ್ನು ಅರಿತುಕೊಂಡು ಅದರಂತೆ ನಡೆಯಲು ಮನಸ್ಸು ಮಾಡಿದರೆ ನನ್ನ ಪ್ರಯತ್ನವು ಸಾರ್ಥಕವಾಯಿತೆಂದು ತಿಳಿಯುತ್ತೇನೆ. ನನ್ನ ಈ ಪುಸ್ತಕದಿಂದ ಮಹಾಪುರುಷರ ಬಗ್ಗೆ ಇನ್ನೂ ಹೆಚ್ಚು ತಿಳಿದುಕೊಳ್ಳಬೇಕೆಂಬ ಕುತೂಹಲ ಉತ್ಪನ್ನವಾದರೂ ಸಾಕು. ಇದರಲ್ಲಿ ಕೆಲವರ ಜೀವನ ಪರಿಚಯಗಳನ್ನು ಹೊಸದಾಗಿ ಬರೆದಿರುವೆನು.

ಕನ್ನಡಿಗರು ಈ ಪುಸ್ತಕವನ್ನು ಸಹಾನುಭೂತಿಯಿಂದ ಕಾಣಬೇಕೆಂದು ಬೇಡಿಕೊಳ್ಳುವೆನು

ಅನಂತ ಕುಲಕರ್ಣಿ

# ಪರಿವಿಡಿ



---

ಈ ಪುಸ್ತಕವನ್ನು ಶ್ರೀ ಎಮ್. ಜಿ. ಪಾಲೇಕರ ಇವರು ಧಾರವಾಡ ವಸಂತ ಮುದ್ರಣಾಲಯದಲ್ಲಿ ಮುದ್ರಿಸಿದರು. ಮತ್ತು ಶ್ರೀ ಕೆ. ಎಸ್. ಕುಲಕರ್ಣಿ ಇವರು ಹುಬ್ಬಳ್ಳಿ ಸ್ಟೇಶನ್ ರೋಡದಲ್ಲಿರುವ ತಮ್ಮ ಬುಕ್ ಡಿಪೋದಲ್ಲಿ ಪ್ರಸಿದ್ಧಿಸಿದರು.



ಶ್ರೀ ಮಹಮ್ಮದ ಅಲಿ



ಶ್ರೀ ಅಬುಲ್‌ಕಲಮ
ಆಜಾದ



ಶ್ರೀಮತಿ ಅನಿಬೆಸ್ಸೆಂಟ



ಶ್ರೀ ಸುರೇಂದ್ರನಾಥ
ಬ್ಯಾನರ್ಜಿ



ಶ್ರೀ ರಾಜೇಂದ್ರ ಪ್ರಸಾದ



ಶ್ರೀ ಲಾಲಾ ಲಜಪತರಾಯ



ಶ್ರೀ ವಲ್ಲಭಭಾಯಿ ಪಟೇಲ



ಶ್ರೀಮತಿ ಸರೋಜಿನಿ ನಾಯುಡು



ಶ್ರೀ ಚಿತ್ತರಂಜನ ದಾಸ



ಶ್ರೀ ಸುಭಾಷಚಂದ್ರ ಬೋಸ



ಶ್ರೀ ದಾದಾಭಾಯಿ
ನವರೋಜಿ



ಶ್ರೀ ಬಾಳಗಂಗಾಧರ
ಟಿಳಕ



ಶ್ರೀ ಜವಾಹರಲಾಲ
ನೆಹರು



ಶ್ರೀ ಮದನಮೋಹನ
ಮಾಲವೀಯ



ಶ್ರೀ ಮೋತೀಲಾಲ
ನೆಹರು

# ರಾಷ್ಟ್ರೀಯ ಮಹಾಪುರುಷರು



## ರಾಜಾ ರಾಮಮೋಹನರಾಯ

೧೮೧೧ರಲ್ಲಿ ರಾಮಮೋಹನರಾಯನ ಅಣ್ಣನು ತೀರಿಕೊಂಡನು. ಆಗ ಸತಿ ಹೋಗುವ ಪದ್ಧತಿಯು ಪ್ರಚಾರದಲ್ಲಿತ್ತು. ಅವನ ಅಣ್ಣನ ಹೆಂಡತಿಯು ಧೈರ್ಯದಿಂದ ಚಿತೆಯನ್ನೇರಿದಳು. ಆದರೂ ಬೆಂಕೆಯಿಂದ ಸುಟ್ಟುಕೊಳ್ಳುವದನ್ನು ತಡಕೊಳ್ಳುವದು ಅವಳಿಂದಾಗಲಿಲ್ಲ. ಅವಳು ಚಿತೆಯಿಂದ ಹೊರಗೆ ಬರಲು ಪ್ರಯತ್ನಿಸಿದಳು. ಆದರೆ ಅಲ್ಲಿ ಕೂಡಿದ ಕ್ರೂರ ಜನರು ಗಳಗಳಿಂದ ಚುಚ್ಚಿ ಅವಳು ಚಿತೆಯಿಂದ ದೂರಾಗದಂತೆ ಮಾಡಿದರು! ಜೀವಂತ ಸುಡುವ ಪದ್ಧತಿ! ಹೆಂಗಸರನ್ನು ಈ ರೀತಿಯಿಂದ ಸುಡುವದನ್ನು ಬೇರೆ ಯಾವ ದೇಶದ ಸಂಸ್ಕೃತಿಯಲ್ಲಿಯೂ ಕಾಣಲಾರಿರಿ. ಮೊದಲು ಹೆಂಗಸರು ಆತ್ಮಸಂತೋಷದಿಂದಲೆ ಚಿತೆಯನ್ನೇರಿ ಸತಿ ಹೋಗುತ್ತಿದ್ದರು. ಆದರೆ ಈ ಪದ್ಧತಿಯು ಬೆಳೆದು ಪತಿಯ ಕೂಡ ಹೆಂಡತಿಯು ಸತಿ ಹೋಗಲೇಬೇಕೆಂಬ ನಿಯಮವಾಯಿತು. ಸತಿ ಹೋಗಲು ಒಪ್ಪದವಳನ್ನು ಜನರು ಒತ್ತಾಯದಿಂದ ಬೆಂಕೆಯಲ್ಲಿ ನೂಕುತ್ತಿದ್ದರು! ಮನುಷ್ಯನನ್ನು ಜೀವಂತವಾಗಿ ಸುಡುವದಕ್ಕಿಂತಲೂ ಹೆಚ್ಚಿನ ಕ್ರೂರ ಕೃತ್ಯ ಯಾವದಿರುವದು? ತನ್ನ ಅಣ್ಣನ ಹೆಂಡತಿಯನ್ನು ಬೆಂಕೆಯಲ್ಲಿ ನೂಕಿ ಸುಡುತ್ತಿರುವದನ್ನು ಕಂಡು ರಾಮಮೋಹನರಾಯರಿಗೆ ಬಹಳ ದುಃಖವಾಯಿತು. ಈ ರಾಕ್ಷಸೀ ಪದ್ಧತಿಯನ್ನು ನಿಲ್ಲಿಸಬೇಕೆಂದು ಪ್ರಯತ್ನವನ್ನು ಪ್ರಾರಂಭಿಸಿದನು. ವೃತ್ತಪತ್ರಗಳಲ್ಲಿ ಲೇಖಗಳನ್ನು ಬರೆದನು. ಭಾಷಣಗಳನ್ನು ಮಾಡಿದನು. ಸತಿ ಹೋಗುವದರ ವಿರುದ್ಧವಾಗಿ ಸಾಮಾಜಿಕ ಚಳವಳಿಯನ್ನೇ ಆರಂಭಿಸಿದನು. ಸರಕಾರವು ಈ ವಿಷಯದಲ್ಲಿ ಕೈ ಹಾಕಬೇಕೆಂದು ಪ್ರಚಂಡವಾದ ಆಂದೋಲನವನ್ನೇ ಹೂಡಿದನು. ಸರಕಾರವು ರಾಜಾರಾಮಮೋಹ

ನರಾಯನ ಅಭಿಪ್ರಾಯವನ್ನು ಒಪ್ಪಿ ಸತಿ ಹೋಗುವದಾಗಲೀ ಅದಕ್ಕೆ ಸಹಾಯ ಮಾಡುವದಾಗಲಿ ಅಪರಾಧವೆಂದು ಕಾಯಿದೆಯನ್ನು ಮಾಡಿತು. ರಾಜಾರಾಮಮೋಹನರಾಯರ ಪ್ರಯತ್ನದಿಂದ ಹಿಂದೂ ವಿಧವೆಯರು ಬದುಕಿ ಉಳಿಯುವಂತಾಯಿತು.

೧೯ನೇ ಶತಮಾನದಲ್ಲಿ ಆಗಿಹೋದ ಸಮಾಜ ಸುಧಾರಕರಲ್ಲಿ ರಾಜಾ ರಾಮಮೋಹನರಾಯರು ಅಗ್ರಗಣ್ಯರು. ಅವರು ಪಾರ್ಸೀ, ಸಂಸ್ಕೃತ ಭಾಷೆಗಳಲ್ಲಿ ಬಲ್ಲಿದರಾಗಿದ್ದರು ಅವನು ಹಿಂದೂ ಧರ್ಮದ ಅನುಯಾಯಿಯಾಗಿದ್ದರೂ ಬೇರೆ ಧರ್ಮವನ್ನು ದ್ವೇಷಿಸುತ್ತಿದ್ದಿಲ್ಲ. ಗ್ರೀಕ ಮತ್ತು ಲ್ಯಾಟಿನ್ ಭಾಷೆಗಳನ್ನು ಅಭ್ಯಾಸ ಮಾಡಿ ಮೂಲದಲ್ಲಿಯೇ 'ಬಾಯಬಲ್' ಗ್ರಂಥವನ್ನು ಓದಿಕೊಂಡನು. ಇದರಿಂದ ಇವನು ಪಾಶ್ಚಾತ್ಯ ತತ್ವಜ್ಞಾನವನ್ನು ಅರಿತುಕೊಂಡನು ರಾಮಮೋಹನರಾಯನು ಧರ್ಮಾಭಿಮಾನಿಯಾದರೂ ಧರ್ಮಾಂಧನಲ್ಲ. ಪಾಶ್ಚಾತ್ಯರಲ್ಲಿದ್ದ ಉತ್ತಮ ಗುಣಗಳನ್ನು ಭಾರತೀಯರು ಕಲಿತುಕೊಳ್ಳಬೇಕೆಂದು ಅವನು ಪ್ರತಿಪಾದಿಸಿದನು. ಆಂಗ್ಲ ಭಾಷೆಯ ಅಭ್ಯಾಸದಿಂದ ನಮಗೆ ಲಾಭವಿದೆಯೆಂದು ಬೋಧಿಸಿದನು. ಸ್ವತಃ ಆಂಗ್ಲ ಭಾಷೆಯನ್ನು ಕಲಿತು, ಜನರಿಗೆ ಆಂಗ್ಲ ಭಾಷೆಯನ್ನು ಕಲಿಸಿದನು. ಇವನು ತೆಗೆದ ಶಾಲೆಯಲ್ಲಿಯೇ ದೇವೇಂದ್ರನಾಥ ಠಾಕೂರರು ಆಂಗ್ಲಭಾಷೆಯನ್ನು ಕಲಿತರು. ಶಾಸ್ತ್ರೀಯ ವಿಜ್ಞಾನದಲ್ಲಿ ಹೆಚ್ಚು ಜ್ಞಾನವನ್ನು ಗಳಿಸಬೇಕಾದರೆ ಆಂಗ್ಲ ಭಾಷೆಯ ಜ್ಞಾನವು ಅವಶ್ಯವೆಂದು ಅವನು ನಂಬಿದ್ದನು. ಪಾಶ್ಚಾತ್ಯರಿಗೆ ಭಾರತೀಯ ಸಂಸ್ಕೃತಿಯ ಪರಿಚಯ ಮಾಡಿಕೊಟ್ಟನು. ಸುಪ್ರಸಿದ್ಧ ಸಂಸ್ಕೃತದ ವಿದ್ವಾಂಸರಾದ ಜರ್ಮನಿಯಮ್ಯಾಕ್ಸಮುಲ್ಲರರು ರಾಮಮೋಹನರಾಯನನ್ನು ಕಂಡು 'ವೇದಗಳೇ ಇವನ ರೂಪದಿಂದ ನನ್ನ ಭೆಟ್ಟಿಗೆ ಬಂದಿವೆ' ಎಂದು ಕೊಂಡಾಡಿದರು. ಭಾರತದಲ್ಲಿ ಇವನು ಸಾಂಸ್ಕೃತಿಕ ಪುನರುಜ್ಜೀವನವನ್ನು ಪ್ರಾರಂಭಿಸಿದನು. ಹಳೆಯ ಗ್ರಂಥಗಳಿಗೆ ಹೊಸ ಅರ್ಥ ಹೇಳಿದನು. ಮೂಢ ನಂಬಿಕೆಗಳನ್ನು ಬಿಟ್ಟುಬಿಡಲು ಉಪದೇಶಿಸಿದನು. ಪರಧರ್ಮ ಸಹಿಷ್ಣುತೆಯನ್ನು ಕಲಿಸಿದನು. ಭಾರತೀಯ ಇತಿಹಾಸದಲ್ಲಿ ರಾಜಾ ರಾಮಮೋಹನನು ಅಮರನಾಗಿರುವನು.

# ರಾಮಕೃಷ್ಣ ಪರಮಹಂಸರು

ರಾಮಕೃಷ್ಣ ಪರಮಹಂಸರು ಯಾವ ಶಾಲೆಗೂ ಹೋಗಿ ವಿದ್ಯೆ ಕಲಿಯಲಿಲ್ಲ. ಮನೆಯಲ್ಲಿಯೇ ಸ್ವಲ್ಪ ಓದು ಬರೆಯಲು ಕಲಿತರು ಅವರ ಬುದ್ಧಿಯು ಚುರುಕಾಗಿದ್ದುದರಿಂದ ಒಮ್ಮೆ ಕೇಳಿದ ಸಂಗತಿಗಳನ್ನು ಅವರು ಮರೆಯುತ್ತಿದ್ದಿಲ್ಲ. ಕಥೆಗಳ ಮುಖಾಂತರವಾಗಿ ಅವರು ತಮ್ಮ ಉಪದೇಶವು ಎಲ್ಲರಿಗೂ ತಿಳಿಯುವಂತೆ ಹೇಳುತ್ತಿದ್ದರು. ಅವರು ಉಪದೇಶ ಮಾಡುವಾಗ ಎಂದೂ ಅಹಂಭಾವವನ್ನು ತೋರಿಸಲಿಲ್ಲ.

ಪರಮಹಂಸರು ಚಿಕ್ಕವರಿರುವಾಗಲೇ ಆಧ್ಯಾತ್ಮದ ಕಡೆಗೆ ಒಲವುಳ್ಳವರು. ಭಜನೆ, ಕೀರ್ತನೆಗಳಿಗೆ ತಪ್ಪದೆ ಹೋಗುತ್ತಿದ್ದರು ಗೆಳೆಯರ ಗುಂಪು ಕಟ್ಟಿಕೊಂಡು ದೇವರ ಪೂಜೆ ಮಾಡುತ್ತಿದ್ದರು ಪುರಾಣದಲ್ಲಿಯ ದೇವತೆಗಳ ಕಥೆಗಳು ಅವರಿಗೆ ಗೊತ್ತಿದ್ದವು. ಅವರು ೪ ವರ್ಷದವರಾದ ಬಳಿಕ ಅವರ ತಾಯಿಯು ಅವರ ಮದುವೆ ಮಾಡಿದಳು ಗದಾಧರನು ೨೪ ವರ್ಷದವನು, ಅವನ ಹೆಂಡತಿಯು ೫ ವರ್ಷದವಳು ಆದರೂ ರಾಮಕೃಷ್ಣರ ಲಕ್ಷ್ಯವು ವಿಷಯ ಸುಖಗಳ ಕಡೆಗೆ ಇರಲಿಲ್ಲ ತಾಯಿಯ ಆಗ್ರಹಕ್ಕಾಗಿ ಅವರು ಲಗ್ನವಾದರು. ಅವರ ಪೂಜೆ, ಭಜನೆಗಳನ್ನು ನೋಡಿ ಜನರು ಗದಾಧರನಿಗೆ ಹುಚ್ಚು ಹಿಡಿದಿರುವದು ಎಂದೆನ್ನತೊಡಗಿದರು. ಕಡೆಗೆ ಡಾಕ್ಟರರು ಗದಾಧರನ ಪ್ರಕೃತಿಯನ್ನು ನೋಡಿ ಇವನಿಗೆ ಹುಚ್ಚು ಹಿಡಿದಿರುವದಿಲ್ಲವೆಂತಲೂ ದೇವರ ಅನುಗ್ರಹದಿಂದ ಅವನು ಹೀಗಾಗಿರುವನೆಂದೂ ಹೇಳಿದರು. ಮೊದಮೊದಲು ಜನರು ರಾಮಕೃಷ್ಣರಿಗೆ ಹುಚ್ಚರೆಂದು ಕರೆದರೂ ಅವರ ಭಕ್ತಿ, ಆತ್ಮತೇಜಸ್ಸು ಹಾಗೂ ಅವರ ತಪಸ್ಸನ್ನು ಕಂಡು ಅವರನ್ನು ಆದರದಿಂದಕಾಣತೊಡಗಿದರು. ಸಾವಿರಾರು ಜನರು ಉಪದೇಶಕ್ಕಾಗಿ ಬರತೊಡಗಿದರು. ಇವರಿಗೆ ಹೆಂಡತಿಯಿದ್ದರೂ ಇವರು ಬ್ರಹ್ಮಚಾರಿಗಳಾಗಿದ್ದರು. ಹೆಂಡತಿಯ ಕಡೆಗೆ ಕಾಮದೃಷ್ಟಿಯಿಂದ ಅವರೆಂದೂ ನೋಡಲಿಲ್ಲ.

ರಾಮಕೃಷ್ಣರು ದಕ್ಷಿಣೇಶ್ವರದಲ್ಲಿರುವಾಗ ಬ್ರಹ್ಮಚರ್ಯದಿಂದ ಅವರ ತಲೆ ಕೆಟ್ಟಿರಬಹುದೆಂದು ಮಥುರಾನಾಥನು ರಾಮಕೃಷ್ಣರನ್ನು ವೇಶ್ಯೆಯ ಮನೆಯಲ್ಲಿ ಹೊಗಿಸಿದನು. ವೇಶ್ಯೆಯು ರಾಮಕೃಷ್ಣರನ್ನು ನೋಡಿ ವೈರಾಗ್ಯವನ್ನು

ತಾಳಿ ತನ್ನನ್ನು ಕ್ಷಮಿಸಬೇಕೆಂದು ಹೇಳಿದಳು. ಇದರಂತೆಯೇ ಇನ್ನೂ ಕೆಲವು ಸ್ತ್ರೀಯರು ಗಾನ, ನರ್ತನ ಇತ್ಯಾದಿಗಳಿಂದ ಅವರನ್ನು ಮೋಹಿಸಲು ಯತ್ನಿಸಿದರು ಆದರೆ ರಾಮಕೃಷ್ಣರ ಆತ್ಮಸಂಯಮವನ್ನು ಕಂಡು ಅವರನ್ನು ಸಿದ್ಧರೆಂದು ಕರೆದು, ಅವರ ಗೊಡವೆಯನ್ನು ಬಿಟ್ಟುಬಿಟ್ಟರು ರಾಮಕೃಷ್ಣರ ಹೆಂಡತಿಯಾದ ಶಾರದಾಮಣಿಯವರು ರಾಮಕೃಷ್ಣರ ಕಾಲನ್ನು ಒತ್ತುತ್ತಿದ್ದಳು. ಅವಳು 'ನಾನು ನಿಮಗೆ ಹೇಗೆ ತೋರುವೆನು?' ಎಂದು ಕೇಳಿದಾಗ 'ದೇವತೆಯಂತೆ' ಎಂದು ಅವರು ಉತ್ತರ ಕೊಟ್ಟರು.

ಧನದ ಮೋಹವಿದ್ದವರಿಂದ ಪರಮಾತ್ಮನ ಸೇವೆಯಾಗಲಾರದೆಂದು ಅವರು ಅನ್ನುತ್ತಿದ್ದರು. ಬಂಗಾರವನ್ನೂ ಮಣ್ಣನ್ನೂ ಅವರು ಸಮಾನವಾಗಿಯೆ ಕಾಣುತ್ತಿದ್ದರು! ಶಿಷ್ಯರಿಗೆ ಸದಾಚಾರಿಗಳಾಗಲು ಬಿನ್ನವಿಸುತ್ತಿದ್ದರು. ಅವರು ಶಿಷ್ಯರನ್ನು ಮುಟ್ಟಿ ಅವರ ಮನದಲ್ಲಿಯ ಕೆಟ್ಟ ಆಶೆಗಳನ್ನು ನಷ್ಟಪಡಿಸುತ್ತಿದ್ದರು ರಾಮಕೃಷ್ಣರು ಮಕ್ಕಳ ಆಶೆಗಾಗಿಯೂ, ಧನದ ಆಶೆಗಾಗಿಯೂ ತಮ್ಮ ಹತ್ತರ ಬರುವವರಿಗೆ ದರ್ಶನ ಕೊಡುತ್ತಿರಲಿಲ್ಲ. ದರ್ಶನ ಕೊಟ್ಟರೂ ಸಕಾಮ ಭಕ್ತಿಯನ್ನು ಬಿಡಿರೆಂದು ಉಪದೇಶ ಮಾಡುತ್ತಿದ್ದರು.

ಸ್ವಾಮಿ ವಿವೇಕಾನಂದರು 'ಪರಮಹಂಸರು ರಾಮ ಮತ್ತು ಕೃಷ್ಣನ ಅವತಾರ' ವೆಂದು ಹೇಳಿರುವರು.

## ಸ್ವಾಮಿ ವಿವೇಕಾನಂದ

ಇವರು ಕಾಲೇಜಿನಲ್ಲಿ ಓದುತ್ತಿದ್ದಾಗ ದಕ್ಷಿಣೇಶ್ವರಕ್ಕೆ ಹೋದರು. ದಕ್ಷಿಣೇಶ್ವರದಲ್ಲಿ ರಾಮಕೃಷ್ಣ ಪರಮಹಂಸರು ಇರುತ್ತಿದ್ದರು ಅವರು ವಿವೇಕಾನಂದರನ್ನು ಕಂಡು ಮೊದಲಸಲವೇ ಉಪದೇಶ ಪ್ರಾರಂಭಿಸಿದರು. ವಿವೇಕಾನಂದರಿಗೆ ಒಳ್ಳೇ ಕಂಠವಿತ್ತು. ರಾಮಕೃಷ್ಣ ಪರಮಹಂಸರು ಅವರಿಗೆ ಹಾಡಲು ಹೇಳಿದರು. ಅವರು ಹಾಡುವದನ್ನು ಮುಗಿಸಿದ ಬಳಿಕ ವಿವೇಕಾನಂದರನ್ನು ಮುಟ್ಟಿದರು. ವಿವೇಕಾನಂದರಿಗೆ ಜ್ಞಾನೋದಯವಾಯಿತು. ಸ್ವಾಮಿ ವಿವೇಕಾನಂದರು ಜಗತ್ತಿನ ತುಂಬ ಸಂಚರಿಸಿ ಆರ್ಯಧರ್ಮದ ಕೀರ್ತಿಯನ್ನು ಬೆಳಗಿಸಿದರು.

ವಿವೇಕಾನಂದ ಸ್ವಾಮಿಗಳು ೧೮೬೩ರಲ್ಲಿ ಕಲಕತ್ತೆಯಲ್ಲಿ ಜನಿಸಿದರು. ಇವರ ಬುದ್ಧಿ ಬಹಳ ಚುರುಕಾದುದರಿಂದ ಶಾಲೆಯಲ್ಲಿ ಬಹು ಬೇಗನೇ ಗುರುಗಳು ಹೇಳಿದ್ದನ್ನು ಗ್ರಹಿಸುತ್ತಿದ್ದರು. ಇವರು ಬಿ. ಎ ಪಾಸಾದಾಗ ೨೦ ವರ್ಷದವರಿದ್ದರು. ತಂದೆಯವರಂತೆಯೇ ಇವರೂ ವಕೀಲರಾಗಿ ಹಣ ಗಳಿಸಬಹುದೆಂದು ಮನೆಯಲ್ಲಿ ತಿಳಕೊಂಡಿದ್ದರು. ಆದರೆ ಇವರ ಒಲವು ಬೇರೆಕಡೆಗಿತ್ತು. ಇವರು ಸತ್ಯವನ್ನು ಶೋಧಿಸುವದಕ್ಕಾಗಿ ಯಾವಾಗಲೂ ಯೋಚನಾಪರರಾಗಿರುತ್ತಿದ್ದರು. ದೇವರನ್ನು ಕಂಡುಹಿಡಿಯಬೇಕೆಂದು ಪ್ರಯತ್ನಿಸತೊಡಗಿದರು. ಕಂಡಕಂಡವರನ್ನು 'ದೇವರು ಎಲ್ಲಿರುವನು?' ಎಂದು ಕೇಳತೊಡಗಿದರು. ರಾಮಕೃಷ್ಣ ಪರಮಹಂಸರನ್ನು 'ದೇವರನ್ನು ನೀವು ಕಂಡಿರುವಿರಾ?' ಎಂದು ಕೇಳಿದರು. ಪರಮಹಂಸರು ತಾವು ಕಂಡಿರುವದಾಗಿಯೂ ವಿವೇಕಾನಂದರಿಗೆ ದೇವರನ್ನು ತೋರಿಸುವದಾಗಿಯೂ ಹೇಳಿದರು.

ಪರಮಹಂಸರಿಂದ ಆಶೀರ್ವಾದ ಪಡೆದು ವಿವೇಕಾನಂದರು ಹಿಂದುಸ್ಥಾನದ ತುಂಬ ಪ್ರವಾಸ ಮಾಡಿದರು. ಅವರು ಹೋದಕಡೆಗೆಲ್ಲ ಸತ್ಯವೇ ಗೆಲ್ಲುವದೆಂತಲೂ, ದೇವರು ಒಬ್ಬನೇ ಎಂತಲೂ ಉಪದೇಶ ಮಾಡುತ್ತಿದ್ದರು. ಬೆಂಗಳೂರಿಗೆ ಬಂದು ಆಗಿನ ದಿವಾಣರಾಗಿದ್ದ ಕೆ. ಶೇಷಾದ್ರಿ ಅಯ್ಯರರ ಮನೆಯಲ್ಲಿ ಅತಿಥಿಗಳಾಗಿದ್ದರು. ಪ್ರವಾಸದಲ್ಲಿ ಅವರು ಜಾತಿ ಭೇದವನ್ನು ಮಾಡದೆ ಭಕ್ತರ ಮನೆಗೆ ಊಟಕ್ಕೆ ಹೋಗುತ್ತಿದ್ದರು. ಬಡವರ ಸೇವೆ ಮಾಡುವದೇ ಸತ್ಯದ ಆರಾಧನೆಯೆಂದು ಬೋಧಿಸಿದರು. ಮೈಸೂರಲ್ಲಿ ಮಹಾರಾಜರು ವಿವೇಕಾನಂದರಿಗೆ ಹಣ ಕೊಡಲು ಮುಂದೆ ಬಂದರು. ವಿವೇಕಾನಂದರು ವಿನಯದಿಂದ 'ನಾನು ಹಣ ಬೇಕಾದಾಗ ತೆಗದುಕೊಳ್ಳುವೆನು. ಈಗ ನನಗೆ ಹಣದ ಆವಶ್ಯಕತೆಯಿಲ್ಲ' ಎಂದು ಹೇಳಿದರು. ಸನ್ಯಾಸಿಯಾದವನು ಹಣ, ಮತ್ತು ಹೆಣ್ಣಿನಿಂದ ದೂರವಿರಬೇಕೆಂದು ಹೇಳಿದರು.

೧೮೯೩ ರಲ್ಲಿ ಚಿಕ್ಯಾಗೋದಲ್ಲಿ ಜಗತ್ತಿನ ಎಲ್ಲ ಧರ್ಮಗಳ ಪರಿಷತ್ತು ಕೂಡಿತ್ತು, ಹಿಂದೂ ಧರ್ಮದ ಪ್ರತಿನಿಧಿಯಾಗಿ ಸ್ವಾಮೀ ವಿವೇಕಾನಂದರು ಚಿಕಾಗೋಕ್ಕೆ ಹೋಗಿದ್ದರು. ಚಿಕಾಗೋದಲ್ಲಿ ನಡೆಯಲಿರುವ ಪರಿಷತ್ತು ಮುಂದೆ ಬಿದ್ದುದರಿಂದ ಅವರು ಅಮೇರಿಕೆಯಲ್ಲಿ ಬಹಳ ಕಾಲ ನಿಲ್ಲಬೇಕಾ

ಯಿತು. ಈ ಸಂಧಿಯನ್ನು ಸಾಧಿಸಿ ಅವರು ಅಮೇರಿಕೆಯಲ್ಲಿ ವೇದಾಂತದ ಮೇಲೆ ಭಾಷಣ ಸುರುವು ಮಾಡಿದರು ಅಮೇರಿಕೆಯುವರು ಸ್ವಾಮಿಯುವರನ್ನು ಕರಿಯ ವರ್ಣದವನೆಂದು ದ್ವೇಷಿಸಿ ಅಪಮಾನ ಮಾಡಿದರು. ಆದರೆ ವಿವೇಕಾನಂದರು ಅಮೇರಿಕನ್ನರ ಅಜ್ಞಾನಕ್ಕಾಗಿ ಮನಸ್ಸಿನಲ್ಲಿಯೇ ಮರುಗಿದರು.

ಚಿಕಾಗೋದಲ್ಲಿ ಪರಿಷತ್ತು ಪ್ರಾರಂಭವಾದ ಬಳಿಕ ಪ್ರತಿಯೊಬ್ಬರೂ ತಮ್ಮ ತಮ್ಮ ಧರ್ಮದ ಮೇಲ್ಮೆಯನ್ನು ಹೇಳುತ್ತ ಪರಧರ್ಮವನ್ನು ಹಳಿಯ ಹತ್ತಿದರು. ತಮ್ಮ ಧರ್ಮವೇ ಶ್ರೇಷ್ಠವೆಂದು ಹೇಳಹತ್ತಿದರು. ವಿವೇಕಾನಂದರು ತಮ್ಮ ಭಾಷಣವನ್ನು ಸುರುವು ಮಾಡಿದರು. ತಮ್ಮ ಭಾಷಣದ ಪ್ರಾರಂಭದಲ್ಲಿ ಅವರು ' ಅಮೇರಿಕನ್ ಸೋದರ ಸೋದರಿಯರೇ' ಎಂದು ನುಡಿದರು. ಇದನ್ನು ಕೇಳಿ ಎಲ್ಲ ಸಭಾಸದರೂ ಚಪ್ಪಾಳೆಹಾಕಿದರು ವಿವೇಕಾನಂದರು ತಮ್ಮ ಭಾಷಣದಲ್ಲಿ ' ಎಲ್ಲ ಧರ್ಮಗಳ ತತ್ವಗಳು ಒಂದೇ ಆಗಿರುವವು ಮಾರ್ಗಗಳು ಭಿನ್ನವಾದರೂ ಗುರಿಯು ಒಂದೇ ಆಗಿರುವದು. ಎಲ್ಲಿ ನದಿಗಳೂ ಸಮುದ್ರವನ್ನು ಸೇರಿ ಒಂದುಗೂಡುವಂತೆ ಎಲ್ಲ ಧರ್ಮಗಳು ಪರಮಾತ್ಮನಲ್ಲಿ ಐಕ್ಯವನ್ನು ಹೊಂದುವವು ' ಎಂದು ಸಾರಿದರು ಈ ಭಾಷಣವನ್ನು ಕೇಳಿ ಅಮೇರಿಕನ್ನರ ಕಣ್ಣು ತೆರೆದವು ಅವರು ಸ್ವಾಮಿಜಿಯವರನ್ನು ಸತ್ಕರಿಸತೊಡಗಿದರು. ಎಲ್ಲ ಜನರೂ ಬಂಧು-ಬಾಂಧವರಂತೆ ಇರಬೇಕೆಂದು ಸ್ವಾಮಿಜಿಯವರು ಉಪದೇಶ ಮಾಡಿದರು. ವಿವೇಕಾನಂದರು ಅಮೇರಿಕಾ, ಇಂಗ್ಲಂಡ, ಫ್ರಾನ್ಸ ಮುಂತಾದ ದೇಶಗಳಲ್ಲಿ ಸಂಚಾರ ಮಾಡಿ ಆರ್ಯಸಂಸ್ಕೃತಿಯನ್ನು ಅವರಿಗೆ ಪರಿಚಯ ಮಾಡಿಕೊಟ್ಟರು.

## ಸ್ವಾಮಿ ರಾಮತೀರ್ಥ

ಸ್ವಾಮೀ ರಾಮತೀರ್ಥರು ೧೮೭೩ರಲ್ಲಿ ಮುರಲೀವಾಲಾ ಎಂಬ ಹಳ್ಳಿಯಲ್ಲಿ ಹುಟ್ಟಿದರು. ಇವರು ತಮ್ಮ ಬಾಲ್ಯವನ್ನು ಬಡತನದಲ್ಲಿಯೇ ಕಳೆಯಬೇಕಾಯಿತು. ಬಿ. ಎ. ಮತ್ತು ಎಂ. ಎ. ಪರೀಕ್ಷೆಗಳನ್ನು ಮೇಲ್ದರ

ಗತಿಯಲ್ಲಿ ಪಾಸಾದರು. ಇವರು ಚಿಕ್ಕವರಿರುವಾಗಿನಿಂದಲೇ ಅಧ್ಯಾತ್ಮದ ಕಡೆಗೆ ಒಲವುಳ್ಳವರಾದರು ತಮ್ಮ ವಿದ್ಯಾಭ್ಯಾಸವನ್ನು ಮುಗಿಸಿದ ಬಳಿಕ ಕೆಲವು ದಿವಸ ಶಿಕ್ಷಕರಾಗಿದ್ದರು. ಮುಂದೆ ಲಾಹೋರ ಕಾಲೇಜಿನಲ್ಲಿ ಗಣಿತದ ಪ್ರಾಧ್ಯಾಪಕರಾದರು ಆದರೂ ಇವರ ಮನಸ್ಸು ಇತ್ತ ಕಡೆಗೆ ಇರಲಿಲ್ಲ. ಸ್ವಾಮಿ ವಿವೇಕಾನಂದರು ಲಾಹೋರಿಗೆ ಬಂದು ತಮ್ಮ ಅಮೋಘ ವಾಣಿಯಿಂದ ಅಧ್ಯಾತ್ಮ ವಿಷಯದ ಮೇಲೆ ಉಪನ್ಯಾಸವಿತ್ತರು. ರಾಮತೀರ್ಥರ ಮನಸ್ಸು ಅಧ್ಯಾತ್ಮದ ಕಡೆಗೆ ಒಲಿಯಿತು. ಅವರು ತಮ್ಮ ಕೆಲಸಕ್ಕೆ ರಾಜೀನಾಮೆ ಕೊಟ್ಟು ತಪಸ್ಸಿಗೆ ನಡೆದರು. ತಪಸ್ಸಿನಿಂದ ಸಿದ್ಧಿಯನ್ನು ಪಡೆದ ಬಳಿಕ ಅಮೇರಿಕಾ, ಜಪಾನ ಮುಂತಾದ ದೇಶಗಳಲ್ಲಿ ತಿರುಗಾಡಿ ಹಿಂದೂ ತತ್ವಜ್ಞಾನವನ್ನು ಅವರಿಗೆ ಬೋಧಿಸಿದರು. ರಾಮತೀರ್ಥರು ತತ್ವಜ್ಞಾನದ ಮೇಲೆ ಅನೇಕ ಗ್ರಂಥಗಳನ್ನು ಬರೆದಿರುವರು. ಕೇವಲ ಶಾಸ್ತ್ರಗಳನ್ನು ಓದಿ ಪಾಂಡಿತ್ಯವನ್ನು ಸಂಪಾದಿಸುವದಕ್ಕಿಂತಲೂ ಓದಿದ್ದನ್ನು ಆಚರಣೆಯಲ್ಲಿ ತರುವದೇ ಮಹತ್ವದ್ದೆಂದು ಅವರು ಸಾರಿರುವರು.

## ಪಂಡಿತ ಈಶ್ವರಚಂದ್ರ ವಿದ್ಯಾಸಾಗರ

ಪಂಡಿತ ಈಶ್ವರಚಂದ್ರ ವಿದ್ಯಾಸಾಗರರು ಬಂಗಾಲದಲ್ಲಿ ೧೮೨೦ ರಲ್ಲಿ ಜನ್ಮ ತಾಳಿದರು ಇವರ ಕಾಲದಲ್ಲಿ ಹಿಂದುಸ್ತಾನದಲ್ಲಿ ಕಲಿತವರ ಸಂಖ್ಯೆಯು ಅತಿ ಕಡಿಮೆಯಾಗಿತ್ತು. ಅದರಲ್ಲಿಯೂ ಹೆಂಗಸರು ವಿದ್ಯೆಯಿಂದ ಬಹಳ ದೂರದಲ್ಲಿದ್ದರು. ಆದ್ದರಿಂದ ಹೆಂಗಸರನ್ನು ವಿದ್ಯಾವಂತರನ್ನಾಗಿ ಮಾಡುವದಕ್ಕಾಗಿ ವಿದ್ಯಾಸಾಗರರು ಬಹಳ ದುಡಿದರು. ಹೆಂಗಸರ ಮೇಲೆ ನಡೆದ ದಬ್ಬಾಳಿಕೆಯನ್ನು ಬಹು ಕಠೋರವಾಗಿ ಖಂಡಿಸಿದರು. ಹೆಂಗಸರಿಗೂ ಗಂಡಸರಷ್ಟೇ ನ್ಯಾಯ ದೊರೆಯಬೇಕೆಂದು ಹೆಣಗಾಡಿದರು ಇವರು ಬ್ರಹ್ಮೋ ಸಮಾಜವೆಂಬ ಪಕ್ಷಕ್ಕೆ ಸೇರಿದವರಾಗಿದ್ದರು.

ಈ ವಿದ್ವಾಂಸರು ಅತ್ಯಂತ ವಿನಯಶೀಲರೆಂತಲೂ ಬಹಳ ಪ್ರಸಿದ್ಧರಾಗಿದ್ದರು ಒಮ್ಮೆ ಒಬ್ಬನು ಬಹಳ ಕಿಮ್ಮತ್ತಿನ ಬಟ್ಟೆಯನ್ನು ಕೊಟ್ಟು

ಕೊಂಡು ರೇಲು ಗಾಡಿಯಿಂದ ಇಳಿದನು. ಅವನ ಕೈಯಲ್ಲಿ ಒಂದು ಸಣ್ಣ ಕೈಚೀಲವಿತ್ತು. ಅವನು ರೇಲ್ವೆ ಸ್ಟೇಷನ್ನಿನ ತುಂಬ ಅಡ್ಡಾಡಿ ' ಕೂಲೀ ' ' ಕೂಲೀ ' ಎಂದು ಕೂಗಿದನು ಆದರೆ ಅವನಿಗೆ ಕೂಲಿಯವನು ಯಾರೂ ದೊರೆಯಲಿಲ್ಲ. ಇದನ್ನೆಲ್ಲ ನೋಡಿ ಅದೇ ಗಾಡಿಯಿಂದಿಳಿದ ಈಶ್ವರಚಂದ್ರ ವಿದ್ಯಾಸಾಗರರು ಅವನ ಬಳಿಗೆ ಹೋಗಿ, ತಾವು ಅವನ ಸಾಮಾನುಗಳನ್ನು ತೆಗದುಕೊಂಡು ಬರುವದಾಗಿ ಹೇಳಿದರು. ಹಾಗೂ ಅವನ ಕೈಯಲ್ಲಿಯ ಚೀಲವನ್ನು ತೆಗೆದುಕೊಂಡು ಅವನ ಮನೆಯುವರೆಗೆ ಮುಟ್ಟಿಸಿದರು. ಅವನು ಕೂಲಿಯನ್ನು ಕೊಡಹೋದಾಗ ಅವರು ಕೂಲಿಯನ್ನು ತೆಗದುಕೊಳ್ಳಲಿಲ್ಲ.

ಅದೇ ಊರಲ್ಲಿ ಆ ಹೊತ್ತು ಸಂಜೆಗೆ ದೊಡ್ಡ ಸಭೆ ನೆರೆದಿತ್ತು. ಜನರೆಲ್ಲರೂ ವಿದ್ಯಾಸಾಗರರನ್ನು ಸತ್ಕರಿಸುತ್ತಿದ್ದರು. ವಿದ್ಯಾಸಾಗರರ ಮೇಲೆ ಚೀಲವನ್ನು ಹೊರಿಸಿಕೊಂಡು ಬಂದಂಥ ತರುಣನೂ ಅಲ್ಲಿಗೆ ಆ ಸಭೆಗಾಗಿಯೇ ಬಂದಿದ್ದನು. ಆ ತರುಣನು ಇದನ್ನೆಲ್ಲ ಕಂಡು ನಾಚಿಕೆ ಪಟ್ಟು ವಿದ್ಯಾಸಾಗರರ ಕ್ಷಮೆ ಕೇಳಿದನು ಈ ಮಹಾ ವಿದ್ವಾಂಸರು ೧೮೯೧ರಲ್ಲಿ ಕಾಲವಾದರು.

## ಸ್ವಾಮೀ ದಯಾನಂದ ಸರಸ್ವತಿ

ಶಿವರಾತ್ರಿಯ ದಿವಸ ಮೂಲ ಶಂಕರನು ಶಿವನ ಪೂಜೆಗೆ ಹೋದನು, ರಾತ್ರಿಯೆಲ್ಲ ನಿದ್ರೆ ಮಾಡದೆ ದೇವರ ಮುಂದೆ ಕುಳಿತುಕೊಳ್ಳಬೇಕೆಂದು ಇವರ ತಂದೆಯವರು ಆಜ್ಞೆ ಮಾಡಿದರು. ಇವರ ತಂದೆಯವರು ಶಿವನ ಮುಂದೆ ತೂಕಡಿಸುತ್ತ ಕುಳಿತುಕೊಂಡಿದ್ದರು. ಉಳಿದವರು ನಿದ್ರೆ ಮಾಡುತ್ತಿದ್ದರು. ಮೂಲ ಶಂಕರನು ದೇವರ ಕಡೆಗೆ ನೋಡುತ್ತ ಒಂದೇ ಮನಸ್ಸಿನಿಂದ ಕುಳಿತುಕೊಂಡಿದ್ದನು. ವೇದದಲ್ಲಿಯ ಮಂತ್ರಗಳನ್ನು ಅನ್ನುತ್ತ ಕುಳಿತುಕೊಂಡಿದ್ದನು. ಇಲಿಗಳು ಶಿವನ ಲಿಂಗದ ಮೇಲೆ ಓಡಾಡುತ್ತಿದ್ದವು. ಏನೂ ಸಪ್ಪಳವಿಲ್ಲದ್ದನ್ನು ಕಂಡು ದೇವರ ನೈವೇದ್ಯಕ್ಕಾಗಿ ಇಟ್ಟಿದ್ದ ಪದಾರ್ಥಗಳನ್ನು ಅವು ತೆಗೆದುಕೊಂಡು ಹೋದವು. ಶಂಕರನ ಲಿಂಗದ ಮೇಲೆ ಇಲಿಗಳು ಓಡಾಡಿದುದರಿಂದ ಅವನಿಗೆ

ಮೂರ್ತಿಯ ಮೇಲೆ ಸಂಶಯ ಬಂದಿತು ಈ ವಿಷಯವನ್ನು ತಂದೆಗೆ ಕೇಳಿದನು ತಂದೆಯು ಸಮಾಧಾನಕಾರಕ ಉತ್ತರ ಕೊಡಲಿಲ್ಲ ಅಂದಿನಿಂದ ಮೂಲ ಶಂಕರನಿಗೆ ಮೂರ್ತಿಪೂಜೆಯಮೇಲಿನ ವಿಶ್ವಾಸವು ಹಾರಿ ಹೋಯಿತು.

ಸ್ವಲ್ಪ ದಿವಸಗಳಲ್ಲಿ ಮೂಲ ಶಂಕರನ ಸೋದರಿಯು ತೀರಿಕೊಂಡಳು. ಇದರಿಂದ ಅವನಿಗೆ ಬಹಳ ದುಃಖವಾಯಿತು ಇವರ ಕಕ್ಕನೂ ತೀರಿಕೊಂಡನು. ಹುಣ್ಣಿನ ಮೇಲೆ ಬರೆ ಕೊಟ್ಟಂತಾಯಿತು. ಜೀವನವು ನಶ್ವರವಾದದ್ದೆಂದು ಅವನಿಗೆ ಅನಿಸತೊಡಗಿತು. ಅಜ್ಞಾನವೇ ದುಃಖಕ್ಕೆ ಕಾರಣವೆಂದು ಅರಿತುಕೊಂಡನು. ನಿಜವಾದ ಜ್ಞಾನವನ್ನು ಮಾಡಿಕೊಳ್ಳುವದಕ್ಕೆ ಕಾಶಿಗೆ ಹೋಗಬೇಕೆಂದು ನಿಶ್ಚಯಿಸಿದನು ಅದಕ್ಕೆ ಇವನ ತಂದೆಯವರು ಒಪ್ಪದೆ ಸಮೀಪದಲ್ಲಿದ್ದ ಪಾಠಶಾಲೆಗೆ ಓದಲು ಕಳಿಸಿದರು. ಮೂಲ ಶಂಕರನು ಅಲ್ಲಿಂದ ತಿರುಗಿ ಬಂದನು. ಇವರ ತಂದೆಯವರು ಇವನ ಮದುವೆಯನ್ನು ನಿಶ್ಚಯಿಸಿದರು. ಮೂಲ ಶಂಕರನಿಗೆ ಮದುವೆಯಾಗುವ ಇಚ್ಛೆಯಿರಲಿಲ್ಲ. ಆದ್ದರಿಂದ ಒಂದು ರಾತ್ರಿ ಮನೆಯಿಂದ ಓಡಿ ಹೋದನು.

ಮೂಲ ಶಂಕರನು ಒಂದು ಹಳ್ಳಿಗೆ ಬಂದು ಸನ್ಯಾಸಿಯ ವೇಷವನ್ನು ಧರಿಸಿ ಅಲ್ಲಿಯೇ ಇರತೊಡಗಿದನು. ಕಾರ್ತಿಕದಲ್ಲಿ ಸಿದ್ಧಪುರದಲ್ಲಿ ವರ್ಷಕ್ಕೊಮ್ಮೆ ಜಾತ್ರೆಯಾಗುತ್ತಿತ್ತು. ಮೂಲಶಂಕರನು ಆ ಜಾತ್ರೆಗೆ ಬಂದನು ಜಾತ್ರೆಯಲ್ಲಿ ಇವರ ತಂದೆಯ ಮಿತ್ರನೊಬ್ಬನು ಇವನಿಗೆ ಭೆಟ್ಟಿಯಾದನು. ಅವನು ಮೂಲಶಂಕರನನ್ನು ಬಹಳ ಬೈದನು. ಮೂಲಶಂಕರನ ತಂದೆಗೆ ಪತ್ರ ಬರೆದನು. ಮೂಲಶಂಕರನ ತಂದೆಯಾದ ಅಂಬಾಶಂಕರನು ತೀವ್ರವೇ ಜಾತ್ರೆಗೆ ಬಂದು ಮಗನನ್ನು ಕಂಡನು. ಮಗನು ತೊಟ್ಟಿರುವ ಬಟ್ಟೆಗಳನ್ನು ನೋಡಿ ಅವನಿಗೆ ಬಹಳ ಸಿಟ್ಟು ಬಂದಿತು. ಅವನ ಅರಿವೆಗಳನ್ನು ಹರಿದೊಗೆದು ಮನೆಗೆ ಕರೆದುಕೊಂಡು ಬಂದನು.

ಮನೆಗೆ ಬಂದಬಳಿಕ ತಂದೆಯು ಮಗನನ್ನು ಕಾಯುವದಕ್ಕೆ ಸೇವಕರನ್ನು ನೇಮಿಸಿದನು. ಮನೆಯಿಂದ ಹ್ಯಾಗೆ ಪಾರಾಗಬೇಕು ಎಂದು

ಯನ್ನಾವಾಗಲೂ ಯೋಚಿಸುತ್ತಿದ್ದನು. ಕಡೆಗೆ ಸೇವಕರು ಮಲಗಿಕೊಂಡ ಹೊತ್ತನ್ನು ಸಾಧಿಸಿ ಮನೆಯಿಂದ ಪಾರಾಗಿ ಹೋದನು. ಸೇವಕರೂ ತಂದೆಯೂ ಎಷ್ಟು ಹುಡುಕಾಡಿದರೂ ದೊರೆಯಲಿಲ್ಲ.

ಮೂಲ ಶಂಕರನು ನರ್ಮದಾ ನದಿಯ ತೀರಕ್ಕೆ ಬಂದನು. ಅಲ್ಲಿ ಒಂದು ಆಶ್ರಮವಿತ್ತು ಆ ಆಶ್ರಮದಲ್ಲಿ ಒಂದು ವರ್ಷದ ವರೆಗೆ ಇದ್ದನು ಇವನು ತೀರ ಚಿಕ್ಕವನಿದ್ದುದರಿಂದ ಇವನನ್ನು ಸಂನ್ಯಾಸಿಯನ್ನಾಗಿ ಮಾಡಲು ಆಶ್ರಮವಾಸಿಗಳು ಒಪ್ಪಲಿಲ್ಲ ಪೂರ್ಣಾನಂದ ಸರಸ್ವತಿಯವರು ಒಂದು ವರ್ಷದ ಮೇಲೆ ಅಲ್ಲಿಗೆ ಬಂದರು ಅವರ ಮುಂದೆ ತನ್ನನ್ನು ಸಂನ್ಯಾಸಿಯಾಗಿ ಮಾಡಬೇಕೆಂದು ಕೇಳಿಕೊಂಡನು. ಒಬ್ಬ ಮರಾಠಿಯ ಪಂಡಿತನು ಇವನನ್ನು ಸಂನ್ಯಾಸಿಯನ್ನಾಗಿ ಮಾಡಬೇಕೆಂದು ಹೇಳಿದನು. ಸ್ವಾಮಿಗಳು ಇವನಿಗೆ ಸಂನ್ಯಾಸ ದೀಕ್ಷೆಯನ್ನಿತ್ತರು. ಅಂದಿನಿಂದ ಮೂಲ ಶಂಕರನು ಸ್ವಾಮಿ ದಯಾನಂದ ಸರಸ್ವತಿಯಾದನು. ಆಗ ಇವನ ವಯಸ್ಸು ಇಪ್ಪತ್ತುನಾಲ್ಕು ಸಂನ್ಯಾಸಿಯಾಗಿ ಹಿಂದುಸ್ತಾನದ ತುಂಬ ತಿರುಗಾಡಿದರು ಒಮ್ಮೆ ಕಾಡಿನಲ್ಲಿ ಪ್ರವಾಸ ಮಾಡುತ್ತಿರುವಾಗ ಒಂದು ಕರಡಿಯು ಮೈಮೇಲೆ ಬಂದಿತು. ಸ್ವಾಮೀಜಿಯವರು ಸುಮ್ಮನೆ ನಿಂತು ಕೊಂಡರು. ಕರಡಿಯು ಅಪಾಯ ಮಾಡದೆ ಹೊರಟು ಹೋಯಿತು.

ಮಥುರಾದಲ್ಲಿ ಒಬ್ಬ ವಿದ್ವಾಂಸರಾದ ಸ್ವಾಮಿಗಳಿದ್ದರು. ಮೈಲೀ ಬೇನೆಯಿಂದ ಅವರ ಕಣ್ಣುಗಳು ಹೋಗಿದ್ದವು. ಸಂಸ್ಕೃತ ಪಂಡಿತರೆಂದು ಇವರು ಹೆಸರಾಗಿದ್ದರು. ಇವರು ಧ್ಯಾನದಲ್ಲಿಯೂ, ವೇದವನ್ನು ಕಲಿಸು ವದರಲ್ಲಿಯೂ ತಮ್ಮ ವೇಳೆಯನ್ನು ಕಳೆಯುತ್ತಿದ್ದರು. ದಯಾನಂದ ಸರಸ್ವತಿಗಳು ವಿದ್ಯಾಭ್ಯಾಸಕ್ಕಾಗಿ ಮಥುರಾಕ್ಕೆ ಬಂದರು. ಮಥುರಾದ ಸ್ವಾಮಿಗಳಾದ ಸ್ವಾಮಿ ವಿರಜಾನಂದರು ಬಹಳ ಸಿಟ್ಟಿನ ಮನುಷ್ಯರಾಗಿ ದ್ದರು. ಸಿಟ್ಟು ಬಂದಾಗ ವಿದ್ಯಾರ್ಥಿಗಳನ್ನು ಹೊಡೆಯುತ್ತಿದ್ದರು ಅವರ ಕೈಯಿಂದ ದಯಾನಂದ ಸರಸ್ವತಿಯವರಿಗೆ ಎಷ್ಟೋಸಾರೆ ಹೊಡೆತ ಬಿದ್ದವು ಹಿಂದುಗಳು ತಮ್ಮ ಸಂಸ್ಕೃತಿಯನ್ನು ಮರೆತಿರುವರು. ಅವರು ಅಜ್ಞಾನ ದಲ್ಲಿರುವರು. ಅವರ ಉದ್ಧಾರ ಮಾಡು ಎಂದು ಸ್ವಾಮಿ ವಿರಜಾನಂದರು ದಯಾನಂದ ಸರಸ್ವತಿಯವರಿಗೆ ಆಜ್ಞೆ ಮಾಡಿದರು. ಗುರುಗಳ ಅಪ್ಪಣೆ

ಯನ್ನು ಪಡೆದುಕೊಂಡು ಸ್ವಾಮಿ ದಯಾನಂದ ಸರಸ್ವತಿಯವರು ಮಥುರೆ ಯನ್ನು ಬಿಟ್ಟು ತೆರಳಿದರು

ಅಲಹಾಬಾದದಲ್ಲಿ ಕುಂಭ ಮೇಳ ನೆರೆದಿತ್ತು. ಸ್ವಾಮೀಜಿಯವರು ಮೂರ್ತಿ ಪೂಜೆಯನ್ನು ಖಂಡಿಸಿ ಅಲ್ಲಿ ಭಾಷಣ ಮಾಡಿದರು

ಸಂಪ್ರದಾಯ ಪ್ರಿಯರಾದ ಪಂಡಿತರು ಇವರಮೇಲೆ ಸಿಟ್ಟಿಗೆದ್ದರು. ಕಾಶಿಯಲ್ಲಿ ಇವರನ್ನು ಬಹಿಷ್ಕರಿಸುವದಕ್ಕಾಗಿ ಒಂದು ಸಭೆ ಕೂಡಿತು. ಅದಕ್ಕೆ ಸ್ವಾಮೀಜಿಯವರು ಹೆದರಲಿಲ್ಲ ಉತ್ತರ ಹಿಂದುಸ್ತಾನದಲ್ಲಿ ತಿರುಗಾಡಿ ಮುಂಬಯಿಗೆ ಬಂದರು. ಮುಂಬಯಿಯಲ್ಲಿ ಆರ್ಯ ಸಮಾಜ ವೆಂಬ ಸಂಸ್ಥೆಯನ್ನು ಸ್ಥಾಪಿಸಿದರು.

ದಯಾನಂದ ಸರಸ್ವತಿಯವರು ಪಂಜಾಬ ಮತ್ತು ಸಂಯುಕ್ತ ಪ್ರಾಂತಗಳಲ್ಲಿ ತಮ್ಮ ಪ್ರಚಾರವನ್ನು ಪ್ರಾರಂಭಿಸಿದರು. ಪಂಜಾಬದಲ್ಲಿ ಬಹಳ ಜನರು ಆರ್ಯ ಸಮಾಜವನ್ನು ಸೇರಿದರು. ರಜಪೂತಸ್ತಾನದ ಲ್ಲಿಯೂ ಇವರಿಗೆ ಬಹಳ ಬೆಂಬಲ ದೊರೆಯಿತು ರಾಜಮಹಾರಾಜರು ಒಳ್ಳೇ ವೈಭವದಿಂದ ಇವರನ್ನು ಸ್ವಾಗತಿಸಿದರು ಆಮೇಲೆ ಜೋಧಪುರ ಸಂಸ್ಥಾನಕ್ಕೆ ತೆರಳಿದರು. ಅಲ್ಲಿಯ ಜನರು ದಯಾನಂದ ಸರಸ್ವತಿಯವ ರನ್ನು ಸ್ವಾಗತಿಸಿದರು. ಅಲ್ಲಿಯ ಮಹಾರಾಜನು ಕೆಟ್ಟ ಮಾರ್ಗವನ್ನು ಹಿಡಿದಿದ್ದನು. ದಯಾನಂದ ಸರಸ್ವತಿಯವರು ಅವನ ಭೆಟ್ಟಿಗೆ ಹೋಗ ಲಿಲ್ಲ. ತನ್ನನ್ನು ಭೆಟ್ಟಿಯಾಗಲು ಸ್ವಾಮೀಜಿಯವರು ಬರುವರೆಂದು ತಿಳಿ ದಿದ್ದನು. ಕಡೆಗೆ ಮಹಾರಾಜನೇ ಸ್ವಾಮೀಜಿಯವರನ್ನು ಭೆಟ್ಟಿಯಾಗಲು ಹೋದನು. ಸ್ವಾಮೀಜಿಯವರು ಅವನಿಗೆ ಉಪದೇಶ ಮಾಡಿದರು. ಮಹಾ ರಾಜನು ಒಬ್ಬಳ ಸಂಗದಿಂದ ದುರ್ನಡತೆಗಿಳಿದಿದ್ದನು ಸ್ವಾಮೀಜಿಯವರ ಉಪದೇಶದಿಂದ ಅವನು ಆವಳ ಸಂಗ ಬಿಟ್ಟನು. ಅವಳು ಸಿಟ್ಟಿಗೆದ್ದು ಸ್ವಾಮೀಜಿಯವರಿಗೆ ವಿಷ ಹಾಕಿದಳು.

---

# ದಾದಾಭಾಯಿ ನವರೋಜಿ

ಇವರು ಹಿಂದುಸ್ಥಾನದ ಪಿತಾಮಹರೆಂದು ಕರೆಯಲ್ಪಡುವರು. ಭಾರತವೆಲ್ಲವೂ ಕಣ್ಣು ಮುಚ್ಚಿ ಬ್ರಿಟಿಶರ ಆಳಿಕೆಯನ್ನು ಗುಲಾಮಗಿರಿಯ ಪಾಶವೆಂದು ಅರಿಯದೆ ಮಲಗಿರುವಾಗ, ಬ್ರಿಟಿಶರ ಕುಹಕ ನೀತಿಯನ್ನು ಬಯಲಿಗೆಳೆದು ಸ್ವಾತಂತ್ರ್ಯವೇ ಇದಕ್ಕೆ ಮದ್ದೆಂದು ಸಾರಿದವರಲ್ಲಿ ಇವರು ಮೊದಲಿಗರು. ಹಿಂದುಸ್ಥಾನದ ಬಡತನಕ್ಕೆ ಬ್ರಿಟಿಶರೇ ಕಾರಣರೆಂತಲೂ ಅವರು ಹಿಂದುಸ್ಥಾನವನ್ನು ಬಿಟ್ಟು ಹೋಗದ ಹೊರತು ನಮ್ಮ ಆರ್ಥಿಕ ಪರಿಸ್ಥಿತಿಯು ಸುಧಾರಿಸಲಾರದೆಂತಲೂ ಹೇಳಿದರು. 'ನಾವು ಭಾರತೀಯರು; ಭಾರತ ರಾಷ್ಟ್ರವು ನಮ್ಮದು' ಎಂದು ಘೋಷಣೆಗೆ ಮೊದಲು ಮಾಡಿದರು.

ದಾದಾಭಾಯಿ ನವರೋಜಿಯವರಿಗೆ ತಮ್ಮ ತಾಯಿಯ ಮೇಲೆ ಬಹಳ ಪ್ರೇಮವಿತ್ತು 'ನನ್ನ ಸದ್ಯದ ಸ್ಥಿತಿಗೆ ನನ್ನ ತಾಯಿಯೇ ಕಾರಣಳು' ಎಂದು ತಮ್ಮ ಆತ್ಮಚರಿತ್ರೆಯಲ್ಲಿ ಬರೆದಿರುವರು ಇವರಿಗೆ ತಾಯಿಯ ಮೇಲೆ ಇರುವ ಪ್ರೇಮದಂತೆಯೇ ದೇಶದ ಮೇಲೆಯೂ ಅಧಿಕವಾದ ಪ್ರೇಮವಿತ್ತು.

ದಾದಾಭಾಯಿಯವರು ಗಣಿತದಲ್ಲಿ ಪ್ರಾವೀಣ್ಯತೆಯನ್ನು ಪಡೆದು ಅದರಲ್ಲಿ ಒಂದು ಸುವರ್ಣ ಪದಕವನ್ನು ಬಹುಮಾನವಾಗಿ ಪಡೆದರು. ೧೮೫೪ರಲ್ಲಿ ಗಣಿತ ಶಾಸ್ತ್ರದ ಪ್ರಾಧ್ಯಾಪಕರಾದರು ಆದರೆ ಇವರು ಬಹಳ ದಿವಸ ಆ ಕೆಲಸವನ್ನು ಮಾಡದೆ ೧೮೫೫ರಲ್ಲಿ ತಮ್ಮ ಹುದ್ದೆಗೆ ರಾಜೀನಾಮೆ ಕೊಟ್ಟು ಕಾಮಾ ಕಂಪನಿಯ ಕೆಲಸಕ್ಕಾಗಿ ಇಂಗ್ಲಂಡಕ್ಕೆ ಹೋದರು

ಇಂಗ್ಲಂಡಕ್ಕೆ ಹೋದಬಳಿಕ ಹಿಂದುಸ್ಥಾನದ ವಿಷಯಕ್ಕೆ ಆಂಗ್ಲರಲ್ಲಿ ತಾತ್ಸಾರ ಭಾವನೆ ಇರುವದೆಂದು ಕಂಡುಕೊಂಡರು. ಆಂಗ್ಲರಿಗೆ ಹಿಂದುಸ್ಥಾನದ ವಿಷಯಕ್ಕೆ ಜ್ಞಾನವಾಗಬೇಕೆಂದು ಅನೇಕ ಉಪನ್ಯಾಸಗಳನ್ನಿತ್ತರು ಕೆಲವು ದಿವಸ ಲಂಡನ ವಿಶ್ವವಿದ್ಯಾಲಯದಲ್ಲಿ ಗುಜರಾಥೀ ಭಾಷೆಯ ಪ್ರಾಧ್ಯಾಪಕರಾಗಿದ್ದರು. ಭಾರತೀಯರ ವಾರ್ಷಿಕ ಉತ್ಪನ್ನವು ೨೦ ರೂ. ಇರುವದೆಂದು ಸಿದ್ಧ ಮಾಡಿಕೊಟ್ಟರು! ಭಾರತದಲ್ಲಿ ಕರಗಳು ಬಹಳ ಹೆಚ್ಚಾಗಿರುವವೆಂದು ಪಾರ್ಲಮೆಂಟನಿಂದ ನಿಯಮಿಸಲ್ಪಟ್ಟ ಕಮೀಟಿಯು

ಮುಂದೆ ಸಾಕ್ಷಿ ಹೇಳಿದರು. ಇವರು ಇಂಗ್ಲಂಡಿನ ಪಾರ್ಲಿಮೆಂಟಿಗೆ ಸದಸ್ಯ ರಾಗಿ ಆರಿಸಿ ಬಂದರು. ಭಾರತೀಯರಿಗೆ ಸೈನ್ಯದಲ್ಲಿಯೂ ನೌಕಾಪಡೆಯ ಲ್ಲಿಯೂ ದೊಡ್ಡ ದೊಡ್ಡ ಅಧಿಕಾರದ ಸ್ಥಳಗಳು ದೊರೆಯುವಂತೆ ಪ್ರಯ ತ್ನಿಸಿದರು.

'ಒಟ್ಟುಗೂಡಿ ಕಾದಿರಿ, ಭಿಕ್ಷೆ ಬೇಡಿದರೆ ಬ್ರಿಟಿಶರು ಸ್ವರಾಜ್ಯವನ್ನು ಕೊಡುವದಿಲ್ಲ. ಚಳವಳಿಯನ್ನು ಹೂಡಿರಿ ಎಂದು ಬೋಧಿಸಿದರು.

## ಸುರೇಂದ್ರನಾಥ ಬ್ಯಾನರ್ಜಿ

ಸುರೇಂದ್ರನಾಥರ ಭಾಷಣಗಳು ಇವರ ದೇಶಪ್ರೇಮದ ದ್ಯೋತಕ ವಾಗಿರುವವು ಇವರಂಥ ವಾಗ್ಮಿಗಳು ಜಗತ್ತಿನಲ್ಲಿಯೇ ತೀರ ಅಲ್ಪ ಜನರಾಗಿರುವರು.

ಸುರೇಂದ್ರನಾಥರು ಕಲಕತ್ತೆಯಲ್ಲಿ ೧೮೪೮ರಲ್ಲಿ ಜನಿಸಿದರು. ಆಂಗ್ಲೊ ಇಂಡಿಯನ್‌ರಿಗಾಗಿದ್ದ ಕಾಲೇಜನ್ನು ಸೇರಿ ಸ್ಕಾಲರಶಿಪ್‌ನ್ನು ಸಂಪಾದಿಸಿ ದರು. ಬಿ. ಎ. ಪಾಸಾಗಿ ಆಯ್. ಸಿ. ಎಸ್. ಗಾಗಿ ಇಂಗ್ಲಂಡಕ್ಕೆ ತೆರಳಿದರು ಆಸಾಮದಲ್ಲಿ ಸಿಲ್ಹೆಟ ಜಿಲ್ಲೆಯ ಅಸಿಸ್ಟಂಟ ಕಲೆಕ್ಟರರಾಗಿದ್ದಾಗ ಸರಕಾರವು ಇವರ ಮೇಲೆ ತಪ್ಪು ಆರೋಪವನ್ನು ಹೊರಸಿತು ಸುರೇಂದ್ರನಾಥರು ಸಿಟ್ಟು ಜಂಕೆಯಾಗಿ ತಮ್ಮ ಮೇಲಿನ ಆರೋಪದವಿಚಾರವು ಬಹಿರಂಗವಾಗಿ ನಡೆಯಬೇಕೆಂದು ಹೇಳಿದರು. ಸರಕಾರವು ಇವರ ಮಾತಿಗೆ ಒಪ್ಪದೆ ಗುಪ್ತ ರೀತಿಯಿಂದ ವಿಚಾರ ಮಾಡಲಿಕ್ಕೆ ಒಂದು ಕಮೀಟಿಯನ್ನು ನೇಮಿಸಿದರು. ಕಮಿಟಿಯು ಸುರೇಂದ್ರನಾಥರು ತಪ್ಪಿಗಾರರೆಂದು ಸಿದ್ಧಮಾಡಿ ಅವರಿಗೆ ಅರ್ಧ ಪೆನಶನ್ ಕೊಡಬೇಕೆಂದು ನಿರ್ಣಯಿಸಿತು ನ್ಯಾಯ ದೊರಕಿಸುವ ದಕ್ಕಾಗಿ ಸುರೇಂದ್ರನಾಥರು ಇಂಗ್ಲಂಡಿಗೆ ತೆರಳಿದರು. ಆದರೆ ಕುಟಿಲ ನೀತಿಜ್ಞರಾದ ಇಂಗ್ಲಿಷರು ಇವರಿಗೆ ನ್ಯಾಯದಾನವನ್ನು ಮಾಡಲಿಲ್ಲ. ತನ್ನ ತಪ್ಪನ್ನು ಮುಚ್ಚಿಕೊಂಡಿತು ಸುರೇಂದ್ರನಾಥರು ಇಂಗ್ಲಿಷ ಸರಕಾರವು ಅನ್ಯಾಯದಿಂದ ರಾಜ್ಯವಾಳುತ್ತಿರುವದೆಂದು ಜಗತ್ತಿಗೆ ತೋರಿಸಿಕೊಟ್ಟರು.

ಲಾರ್ಡ ಲಿಟನ್ನನು ವೃತ್ತಪತ್ರಗಳ ಸ್ವಾತಂತ್ರ್ಯವನ್ನು ಹರಣಮಾಡಿದನು. ಸುರೇಂದ್ರನಾಥರು ಈ ಕಾಯಿದೆಯ ವಿರುದ್ಧ ಚಳವಳಿಯನ್ನು ಹೂಡಿದರು. ಕಲಕತ್ತೆಯಲ್ಲಿ ಪ್ರಚಂಡ ನಿಷೇಧಾತ್ಮಕ ಸಭೆಯನ್ನು ಕೂಡಿಸಿದರು ಇದರ ಪರಿಣಾಮವಾಗಿ ಲಾರ್ಡ ರಿಪನ್ನನ ಆಳಿಕೆಯಲ್ಲಿ ವೃತ್ತಪತ್ರಿಕೆಗಳಿಗೆ ಮರಳಿ ಸ್ವಾತಂತ್ರ್ಯ ದೊರೆಯಿತು.

೧೮೭೬ ರಲ್ಲಿ ಇಂಗ್ಲಿಷ ಪ್ರಾಧ್ಯಾಪಕರಾಗಿದ್ದರು. ಆದರೆ ಸರಕಾರೀ ಕಾಲೇಜುಗಳಲ್ಲಿ ಕೆಲಸ ಮಾಡಲು ಇವರಿಗೆ ಉತ್ಸಾಹವಿಲ್ಲದಾಯಿತು. ಆದಕ್ಕಾಗಿ ತಾವೇ ಕಷ್ಟಪಟ್ಟು ಒಂದು ಹೊಸ ಕಾಲೇಜನ್ನು ಸ್ಥಾಪಿಸಿದರು ಕೆಲವು ವರ್ಷಗಳಲ್ಲಿಯೇ ಇವರು ತೆಗೆದ ಕಾಲೇಜು ಪ್ರಖ್ಯಾತವಾಯಿತು.

ವೃತ್ತಪತ್ರಿಕೆಯನ್ನು ಹೊರಡಿಸಿ ಬಂಗಾಲದಲ್ಲಿ ನವಚೈತನ್ಯವನ್ನು ಉಂಟು ಮಾಡಿದರು. ಸರಕಾರವು ಇವರು ನ್ಯಾಯಾಧೀಶರ ತೀರ್ಪಿನ ಮೇಲೆ ಟೀಕೆ ಬರೆದಿರುವರೆಂತಲೂ ಆದರಿಂದ ನ್ಯಾಯಾಧೀಶರ ಅಪಮಾನವಾಯಿತೆಂದೂ ಬಗೆದು ಎರಡು ತಿಂಗಳ ಸಾದಾ ಶಿಕ್ಷೆ ವಿಧಿಸಿದರು ಸಾರ್ವಜನಿಕ ಕಾರ್ಯಕ್ಕೆಂದು ಶಿಕ್ಷೆ ಅಮಲಿನಲ್ಲಿಬಂದುದು ಇದೇ ಮೊದಲು ‘ಬಂಗಾಲೀ’ ವೃತ್ತಪತ್ರಿಕೆಯ ಮುಖಾಂತರವಾಗಿ ಇವರು ಮಾಡಿದ ಸೇವೆಯು ಅಮೋಘವಾದುದು ಇವರು ಅಂತರರಾಷ್ಟ್ರೀಯ ಪತ್ರಿಕಾ ಪರಿಷತ್ತಿಗೆ ಭಾರತದ ಪ್ರತಿನಿಧಿಯಾಗಿ ಹೋಗಿದ್ದರು.

೧೮೯೫ ರಲ್ಲಿ ಪುಣೆಯಲ್ಲಿ ನೆರೆದ ರಾಷ್ಟ್ರೀಯ ಮಹಾಸಭೆಗೆ ಅಧ್ಯಕ್ಷರಾಗಿದ್ದರು. ಕಲಕತ್ತಾ ಕಾರ್ಪೋರೇಶನ್‌ದ ಸಭಾಸದರಾಗಿ ಜನತಾ ಸೇವೆಯನ್ನು ಮಾಡಿದರು. ಅವರು ಪರಂಪರಾಪ್ರಿಯರಲ್ಲ! ಪರಸಂಸ್ಕೃತಿಯಲ್ಲಿಯ ಒಳ್ಳೇ ಗುಣಗಳನ್ನು ತೆಗೆದುಕೊಳ್ಳಬೇಕೆಂದು ಹೇಳುತ್ತಿದ್ದರು ನಮ್ಮ ಸಂಸ್ಕೃತಿಯಲ್ಲಿಯ ದೋಷಗಳನ್ನು ಬಿಟ್ಟುಬಿಡಲು ಜನರಿಗೆ ಉಪದೇಶಿಸುತ್ತಿದ್ದರು. ೧೯೨೫ ರಲ್ಲಿ ಇವರು ಸ್ವರ್ಗಸ್ಥರಾದರು.

---

# ಫಿರೋಜಶಹಾ ಮೆಹತಾ

ಕಾಂಗ್ರೆಸ್‌ನ್ನು ಸ್ಥಾಪಿಸುವ ಕಾರ್ಯದಲ್ಲಿಯೂ ಅದರ ಧ್ಯೇಯ ಧೋರಣೆಗಳನ್ನು ನಿರ್ಣಯಿಸುವ ಕಾರ್‍ಯದಲ್ಲಿಯೂ ಮೆಹತಾರವರು ಬಹಳ ದುಡಿದಿರುವರು, ಇವರು ೧೮೪೫ ರಲ್ಲಿ ಮುಂಬಯಿಯಲ್ಲಿ ಜನಿಸಿದರು. ೧೮೬೪ ರಲ್ಲಿ ಬಿ. ಎ. ಪದವಿಯನ್ನು ಸಂಪಾದಿಸಿ ಬ್ಯಾರಿಸ್ಟರ ಪರೀಕ್ಷೆಗಾಗಿ ಇಂಗ್ಲಂಡಕ್ಕೆ ತೆರಳಿದರು ಇಂಗ್ಲಂಡದಲ್ಲಿರುವಾಗ ಇವರಿಗೆ ದಾದಾಭಾಯಿಯವರ ಪರಿಚಯವಾಯಿತು ಅವರ ಪರಿಚಯದಿಂದ ಇವರ ಒಲವು ದೇಶಸೇವೆಯ ಕಡೆಗೆ ಒಲಿಯಿತು. ಲಂಡನದಲ್ಲಿರುವಾಗ ಲಂಡನ ಲಿಟರರಿ ಸೊಸಾಯಿಟಿ ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ೧೮೬೯ ರಲ್ಲಿ ನವರೋಜಿಯವರಿಗೆ ಅರ್ಪಿಸುವದಕ್ಕಾಗಿ ೩೦,೦೦೦ ರೂ. ಗಳನ್ನು ಕೂಡಿಸಿದರು. ಇವರಿಗೆ ಮುಂಬಯಿ ಪಟ್ಟಣದ ಅನಭಿಷಕ್ತ ರಾಜರೆಂದು ಕರೆಯುತ್ತಿದ್ದರು. ಇವರು ಸತತವಾಗಿ ೩೫ ವರ್ಷಗಳ ವರೆಗೆ ಮುಂಬಯಿ ಕಾರ್ಪೋರೇಶನ್‌ದ ಸಭಾಸದರಾಗಿದ್ದರು. ಮೂರು ಸಲ ಅದರ ಅಧ್ಯಕ್ಷರಾಗಿದ್ದರು. ಹಲವು ವರ್ಷಗಳ ವರೆಗೆ ಮುಂಬಯಿ ವಿಶ್ವವಿದ್ಯಾಲಯದ ಸಿನೇಟ ಹಾಗೂ ಸಿಂಡಿಕೇಟಗಳ ಸದಸ್ಯರಾಗಿದ್ದರು. ಮುಂಬಯಿಯಲ್ಲಿ ನೆರೆದ ಮೊದಲನೇ ಕಾಂಗ್ರೆಸ್ಸಿಗೆ ಸ್ವಾಗತಾಧ್ಯಕ್ಷರಾಗಿದ್ದರು. ಮುಂಬಯಿ ಕ್ರಾನಿಕಲ್ ಪತ್ರಿಕೆಯನ್ನು ಹೊರಡಿಸಿದರು ೧೮೯೦ರಲ್ಲಿ ಕಾಂಗ್ರೆಸ್ಸಿನ ಅಧ್ಯಕ್ಷರಾದರು. ಇವರ ಕಾಯಿದೆ ಪಾಂಡಿತ್ಯವು ಅಗಾಧವಾದದ್ದು. ಮಹಾತ್ಮಾ ಗಾಂಧಿಯವರು ತಮ್ಮ ಆತ್ಮಚರಿತ್ರೆಯಲ್ಲಿ ಫಿರೋಜಶಹಾ ಮೆಹತಾರವರು ಸಿಂಹದಂತೆ ಘರ್ಜಿಸುತ್ತಿದ್ದರೆಂತಲೂ, ಕಾಯಿದೆಯೆಲ್ಲವೂ ಅವರ ನಾಲಿಗೆಯಲ್ಲಿ ಇದ್ದಿತೆಂತಲೂ ಬರೆದಿರುವರು. ಮೆಹತಾರವರು ಮಂದಪಕ್ಷಕ್ಕೆ ಸೇರಿದವರು. ಇವರ ತ್ಯಾಗ, ಪಾಂಡಿತ್ಯ, ಕಾರ್ಯಕುಶಲತೆ, ವಾಕ್‌ಚಾತುರ್ಯಗಳು ಅತ್ಯದ್ಭುತವಾದವುಗಳು.

## ನ್ಯಾಯಮೂರ್ತಿ ರಾನಡೆ

ಇವರು ಸರಕಾರೀ ಅಧಿಕಾರಿಗಳಾಗಿದ್ದರೂ ರಾಷ್ಟ್ರೀಯ ಮಹಾಸಭೆಗೆ ಹೋಗುತ್ತಿದ್ದರು. ತಾನು ಸರಕಾರಿ ನೌಕರನಾದರೂ ತನಗೆ ಸಾರ್ವಜನಿಕ ಜೀವನದಲ್ಲಿ ಕೆಲಸ ಮಾಡುವ ಅಧಿಕಾರವುಂಟೆಂದು ಇವರು ತಿಳಿಸಿದ್ದರು. ಇವರು ಅಸಾಮಾನ್ಯ ಕಾಯಿದೆ ಪಂಡಿತರು ಮುಂಬಯಿ ಹಾಯಕೋರ್ಟಿನ ನ್ಯಾಯಮೂರ್ತಿಗಳಾಗಿದ್ದರು. ಇವರು ಮಂದಪಕ್ಷದವರು. ಮೊದಲನೇ ರಾಷ್ಟ್ರೀಯ ಮಹಾಸಭೆಯನ್ನು ಕೂಡಿಸುವಲ್ಲಿ ಬಹಳ ಹೆಣಗಾಡಿದರು. ಗೋಖಲೆ ಮುಂತಾದ ತರುಣರನ್ನು ಹುರಿದುಂಬಿಸಿ ರಾಷ್ಟ್ರೀಯ ಕಾರ್ಯಕ್ಕೆ ಅಣಿಮಾಡಿದರು ನಮ್ಮ ಉನ್ನತಿಯಾಗುವದಕ್ಕೆ ರಾಜಕೀಯ ಸ್ವಾತಂತ್ರ್ಯವು ಆವಶ್ಯವೆಂದು ಇವರು ಮನಗಂಡಿದ್ದರು:

## ಗೋಪಾಲಕೃಷ್ಣ ಗೋಖಲೆ

ಗೋಖಲೆಯವರು ರಾನಡೆಯವರ ಶಿಷ್ಯರು ಮಹಾತ್ಮಾ ಗಾಂಧಿಯವರ ರಾಜಕೀಯ ಗುರುಗಳು ಇವರು ಅರ್ಥಶಾಸ್ತ್ರ, ಗಣಿತ, ಇತಿಹಾಸಗಳಲ್ಲಿ ಪಂಡಿತರು. ಪುಣೆಯ ನ್ಯೂ ಇಂಗ್ಲಿಷ ಶಾಲೆಯಲ್ಲಿ ಶಿಕ್ಷಕರಾದರು. ಇವರ ಪ್ರಯತ್ನದಿಂದ ಫರ್ಗ್ಯೂಸನ್ ಕಾಲೇಜು ಸ್ಥಾಪನೆಯಾಯಿತು ಆ ಕಾಲೇಜಿನಲ್ಲಿ ಅರ್ಥಶಾಸ್ತ್ರ ಮತ್ತು ಗಣಿತದ ಪ್ರಾಧ್ಯಾಪಕರಾದರು. ಇವರಿಗೆ ಬೇರೆ ಕಾಲೇಜುಗಳಲ್ಲಿ ಪ್ರಾಧ್ಯಾಪಕರಾಗುವದು ಸಾಧ್ಯವಿತ್ತು. ಹಾಗೆ ಮಾಡಿದ್ದರೆ ಇವರಿಗೆ ಹೆಚ್ಚು ಸಂಬಳವೂ ದೊರೆಯಬಹುದಾಗಿತ್ತು. ಆದರೆ ಗೋಖಲೆಯವರು ತಾವು ಕಟ್ಟಿದ ಸಂಸ್ಥೆಯ ಸಲುವಾಗಿ ಕೇವಲ ೭೦ ರೂ. ಪಗಾರ ತೆಗೆದುಕೊಂಡು ಕೆಲಸ ಮಾಡಿದರು. ಹುಡುಗರಲ್ಲಿ ಬೆರೆತು ಅವರಿಗೆ ರಾಷ್ಟ್ರ ಸೇವೆಯ ದೀಕ್ಷೆ ಕೊಟ್ಟರು. ಇವರು ತಮ್ಮ ವಯಸ್ಸಿನ ೨೭ ನೇ ವರ್ಷದಲ್ಲಿಯೇ ಮುಂಬಯಿ ವಿಶ್ವವಿದ್ಯಾನಿಲಯದಿಂದ ಫೆಲೋಗಳಾದರು ಇಷ್ಟು ಚಿಕ್ಕ ವಯಸ್ಸಿನಲ್ಲಿ ಫೆಲೋಗಳಾದವರು ಭಾರತೀಯರಲ್ಲಿ ಇವರೇ ಮೊದಲಿಗರು. ರಾಜಕಾರಣದಲ್ಲಿ ಸೇರುವವರು ಅರ್ಥಶಾಸ್ತ್ರ ರಾಜನೀತಿಗಳಲ್ಲಿ

ಪಾರಂಗತರಾಗಿರಬೇಕೆಂದು ರಾನಡೆಯವರ ಅಭಿಪ್ರಾಯವಾಗಿತ್ತು. ರಾನಡೆಯವರ ಹೇಳಿಕೆಯಂತೆ ಇವರು ರಾಜನೀತಿ, ಇತಿಹಾಸ, ಅರ್ಥಶಾಸ್ತ್ರಗಳನ್ನು ಓದಿಕೊಂಡು ಅದರಲ್ಲಿ ಪಾರಂಗತರಾದರು. ೧೮೮೭ ರಲ್ಲಿ ವೃತ್ತಪತ್ರಿಕೆಯನ್ನು ತೆಗೆದರು ಡೆಕ್ಕನ್ ಎಜ್ಯುಕೇಶನ್ ಸೊಸಾಯಿಟಿಯ ಕಾರ್ಯದರ್ಶಿಗಳಾಗಿ ಕೆಲಸ ಮಾಡಿದರು 'ಸುಧಾರಕ' ಪತ್ರಿಕೆಯ ಸಂಪಾದಕರಾದರು. ಇಂಗ್ಲಂಡದಲ್ಲಿ ಭಾರತದ ಬಗ್ಗೆ ಭಾಷಣಗಳನ್ನು ಮಾಡಿದರು. ಇವರ ಅಗಾಧವಾದ ಪಾಂಡಿತ್ಯವನ್ನು ಕಂಡು ಇಂಗ್ಲಿಷರು ಬೆರಗಾದರು

೧೯೦೫ ರಲ್ಲಿ ದಿಲ್ಲಿಯ ಕೌನ್ಸಿಲ್ಲಿನ ಸಭಾಸದರಾದರು. ಇವರು ತಮ್ಮ ಪಾಂಡಿತ್ಯದಿಂದ ಕೂಡಿದ ಭಾಷಣಗಳಿಂದ ಎದುರಾಳಿಗಳನ್ನು ಬಗ್ಗುಬಡಿಯುತ್ತಿದ್ದರು. ಅಂದಾಜ ಪತ್ರಿಕೆಯನ್ನು ಪಾಸು ಮಾಡಿಕೊಳ್ಳಬೇಕಾದರೆ ಸರಕಾರಕ್ಕೆ ಜೀವ ಹೋದಂತಾಗುತ್ತಿತ್ತು.

ಉಪ್ಪಿನ ಮೇಲಿನ ಕರವನ್ನು ಬಲವಾಗಿ ಖಂಡಿಸಿದರು. ಸಾಕ್ಷರತಾ ಪ್ರಸಾರದ ಸಲುವಾಗಿ ಪ್ರಯತ್ನಿಸಿದರು ವಿಶ್ವವಿದ್ಯಾಲಯದ ಬಿಲ್ಲನ್ನು ವಿರೋಧಿಸಿದರು.

ಪ್ರತಿಯೊಂದು ಅಧಿವೇಶನಕ್ಕೂ ಗೋಖಲೆಯವರು ಹೋಗುತ್ತಿದ್ದರು ೧೯೦೫ ರಲ್ಲಿ ಕಾಶಿಯಲ್ಲಿ ನೆರೆದ ರಾಷ್ಟ್ರೀಯ ಮಹಾಸಭೆಯ ಅಧ್ಯಕ್ಷರಾಗಿದ್ದರು. ತಮ್ಮ ಭಾಷಣದಲ್ಲಿ ಕರ್ಝನನ ಆಳಿಕೆಯನ್ನು ಔರಂಗಜೇಬನ ಆಳಿಕೆಗೆ ಹೋಲಿಸಿರುವರು. ಇವರು ಮಂದಪಕ್ಷಕ್ಕೆ ಸೇರಿದ್ದರೂ ಸರಕಾರದ ವಿರುದ್ಧವಾಗಿ ಸತ್ಯಾಗ್ರಹ ಹೂಡುವದಕ್ಕೆ ಅಡ್ಡಿಯಿಲ್ಲವೆಂದು ಸಾರಿದರು.

೧೯೦೫ ರಲ್ಲಿ 'ಭಾರತ ಸೇವಾ ಸಮಾಜ' ವನ್ನು ಸ್ಥಾಪಿಸಿದರು. ಮಾತೃಭೂಮಿಯ ಪ್ರೇಮ, ತ್ಯಾಗ, ಶಿಕ್ಷಣಪ್ರಸಾರ, ಲೋಕಜಾಗೃತಿ ಇವು ಈ ಸಂಸ್ಥೆಯ ಗುರಿಯಾಗಿದ್ದವು.

ಗೋಖಲೆಯವರು ಮನಸ್ಸು ಮಾಡಿದ್ದರೆ ಬೇಕಾದಷ್ಟು ಸಂಪಾದಿಸಬಹುದಾಗಿತ್ತು. ಆದರೆ ಹಣ ಗಳಿಸುವದರಲ್ಲಿ ವೇಳೆಯನ್ನು ಕಳೆಯದೇ ಅಲ್ಪ ಹಣದಿಂದ ಸಂತೋಷಪಟ್ಟು ತ್ಯಾಗದಿಂದ ತಮ್ಮ ಜೀವನ ಸಾಗಿಸಿದ್ದರು. ತ್ಯಾಗವಿಲ್ಲದೆ ದೇಶಸೇವೆಯು ಸಾಧ್ಯವಿಲ್ಲವೆಂದು ಸಾರಿದರು. ಇವರಿಗೆ

ಸರಕಾರವು ಕೆ. ಸಿ ಆಯ್. ಇ. ಪದವಿಯನ್ನು ಕೊಟ್ಟಿತು. ಆದರೆ ಇವರು ಆ ಪದವಿಯನ್ನು ಸ್ವೀಕರಿಸಲಿಲ್ಲ. ಲೋಕಮಾನ್ಯರು, ಗೋಖಲೆಯವರು ಭಾರತದ ಕೋಹಿನೂರ ಎಂದು ಕರೆದರು.

## ಪಂಡಿತ ರಮಾಬಾಯಿ

ಇವರು ಮಹಾರಾಷ್ಟ್ರದ ಸಂಸ್ಕೃತ ಪಂಡಿತರು. ಇವರು ಸಂಸ್ಕೃತದಲ್ಲಿ ಬಹಳ ವಿದ್ವಾಂಸರಾಗಿದ್ದರು. ಸ್ತ್ರೀಯರಿಗೆ ಶಿಕ್ಷಣ ಕೊಡುವದಕ್ಕಾಗಿ ಒಂದು ಸ್ತ್ರೀ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಿದರು ಮುಂದೆ ಇಂಗ್ಲಂಡ ಹಾಗೂ ಅಮೇರಿಕೆಗೆ ಹೋಗಿ ಅಲ್ಲಿಯ ಸ್ತ್ರೀ ಶಿಕ್ಷಣ ಸಂಸ್ಥೆಗಳನ್ನು ನೋಡಿಕೊಂಡು ತಿರುಗಿ ಬಂದರು. ಮುಂಬಯಿಯಲ್ಲಿ 'ಶಾರದಾಸದನ' ಎಂಬ ಸಂಸ್ಥೆಯನ್ನು ವಿಧವೆಯರಿಗಾಗಿ ತೆಗೆದರು. ಇವರು ಮುಂದೆ ಕ್ರಿಶ್ಚಿಯನ್ ಧರ್ಮವನ್ನು ಸ್ವೀಕರಿಸಿದ್ದರಿಂದ ಇದಕ್ಕೆ ಜನರ ಸಹಾಯವು ತಪ್ಪಿತು ಆದ್ದರಿಂದ 'ಶಾರದಾಸದನ' ವು ನಿಂತುಹೋಯಿತು. ಈ ಸಂಸ್ಥೆಯು ನಿಂತಬಳಿಕ ಕೇಡಗಾಂವದಲ್ಲಿ 'ಮುಕ್ತಿಸದನ'ವನ್ನು ಸ್ಥಾಪಿಸಿದರು. ಅದನ್ನು ಈಗಲೂ ಅವರ ಮಗಳು ನಡೆಸುತ್ತಿರುವಳು. ಇಲ್ಲಿ ಕ್ರಿಶ್ಚಿಯನ್ ಹೆಂಗಸರಿಗೆ ಪ್ರಾಥಮಿಕ ಶಿಕ್ಷಣ, ದಂಧೆ ಶಿಕ್ಷಣಗಳು ಕೊಡಲ್ಪಡುವವು.

## ಲೋಕಮಾನ್ಯ ಟಿಳಕ

ಭಾರತೀಯರಲ್ಲಿ ಅಸಂತೋಷವನ್ನುಂಟುಮಾಡಿ, 'ನಾವು ಗುಲಾಮರಿರುವೆವು. ಸ್ವರಾಜ್ಯವು ನಮ್ಮ ಜನ್ಮಸಿದ್ಧ ಹಕ್ಕು' ಎಂದು ಜನರನ್ನು ಬಡಿದೆಬ್ಬಿಸಿದರು. ಜನರು ಬ್ರಿಟಿಶ ಸಂಸ್ಕೃತಿಗೆ ಮಾರುಹೋಗಿ ತಮ್ಮ ಸಂಸ್ಕೃತಿಯನ್ನು ಮರೆತು ಅಂಧಾನುಯಾಯಿಗಳಂತೆ ಆಂಗ್ಲರನ್ನು ಅನುಸರಿಸತೊಡಗಿದ್ದರು. ಆ ಕಾಲದಲ್ಲಿ ಟಿಳಕರು ಜನರಲ್ಲಿ ಜಾಗೃತಿಯನ್ನುಂಟು ಮಾಡಿದರು. ತಮ್ಮ ಜೀವಮಾನವೆಲ್ಲವನ್ನು ಜನಸೇವೆಯಲ್ಲಿ ಕಳೆದರು.

ಟಿಳಕರು ೧೮೫೬ ರಲ್ಲಿ ರತ್ನಾಗಿರಿಯಲ್ಲಿ ಜನಿಸಿದರು. ಇವರ ತಂದೆಯವರು ಪ್ರಾಥಮಿಕ ಶಾಲೆಯಲ್ಲಿ ಮುಖ್ಯೋಪಾಧ್ಯಾಯರಾಗಿದ್ದರು. ಇವರ ತಂದೆಯುವರು ೧೮೬೬ ರಲ್ಲಿ ಅಸಿಸ್ಟಂಟ ಎಜ್ಯುಕೇಶನಲ್ ಇನಸ್ಪೆಕ್ಟರರಾದರು. ಈ ಅಧಿಕಾರವನ್ನು ಪಡೆದ ಬಳಿಕ ಅವರಿಗೆ ಪುಣೆಗೆ ವರ್ಗವಾಯಿತು. ಆದ್ದರಿಂದ ಟಿಳಕರು ತಮ್ಮ ಶಿಕ್ಷಣವನ್ನು ಪುಣೆಯಲ್ಲಿಯೇ ಮುಗಿಸಿದರು. ೧೮೭೬ ರಲ್ಲಿ ಬಿ. ಎ ಪರೀಕ್ಷೆಯಲ್ಲಿ ಮೊದಲನೇ ವರ್ಗದಲ್ಲಿ ಪಾಸಾದರು. ೧೮೭೯ ನೇ ಇಸ್ವಿಯಲ್ಲಿ ಎಲ್‌ಎಲ್. ಬಿ. ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಗಣಿತ ಮತ್ತು ಸಂಸ್ಕೃತ ಇವು ಟಿಳಕರ ಪ್ರೀತಿಯ ವಿಷಯಗಳಾಗಿದ್ದವು.

ಅವರು ಪದವೀಧರರಾದ ಬಳಿಕ ಇಂಗ್ಲಿಷ ಶಾಲೆಯನ್ನು ತೆಗೆಯಬೇಕೆಂದು ಮಾಡಿದರು. ಶಿಕ್ಷಣ ಪ್ರಸಾರವು ಅತಿ ಕಡಿಮೆಯಾಗಿತ್ತು. ಶಿಕ್ಷಣ ಪ್ರಸಾರವಾಗದೆ ನಮ್ಮ ದೇಶವು ಮುಂದೆ ಬರಲಾರದೆಂದು ಅವರು ತಿಳಿದಿದ್ದರು. ಆದ್ದರಿಂದ ಚಿಪಳೂಣಕರ, ಆಗರಕರರ ಸಹಾಯದಿಂದ ಇಂಗ್ಲಿಷ ಸಾಲೆಯನ್ನು ಸ್ಥಾಪಿಸಿದರು. ಆಪಟೆ, ಮಾಧವರಾವ, ನಾಮಜೋಶಿ ಮುಂತಾದ ವಿದ್ವಾಂಸರು ಈ ಶಿಕ್ಷಣ ಸಮಿತಿಗೆ ಸೇರಿದರು. ಇದೇ ಮುಂದೆ ಬೆಳೆದು ಮಹಾವಿದ್ಯಾಲಯವಾಯಿತು. ಟಿಳಕರು ಈ ಮಹಾವಿದ್ಯಾಲಯದಲ್ಲಿ ಗಣಿತ ಮತ್ತು ಸಂಸ್ಕೃತ ಪ್ರಾಧ್ಯಾಪಕರಾಗಿದ್ದರು. ಈ ಸಂಸ್ಥೆಯ ವತಿಯಿಂದಲೇ 'ಕೇಸರಿ' ಮತ್ತು 'ಮರಾಠಾ' ವೃತ್ತಪತ್ರಿಕೆಗಳು ಹೊರಡುತ್ತಿದ್ದವು. ಪ್ರಾಧ್ಯಾಪಕರಾದವರು ರಾಜಕಾರಣದಲ್ಲಿ ಭಾಗ ತೆಗೆದುಕೊಳ್ಳಬಾರದೆಂದು ಡೆಕ್ಕನ್ ಎಜ್ಯುಕೇಶನ್‌ದ ಆಜೀವ ಸಭಾಸದರು ವಾದಿಸಹತ್ತಿದರು. ಇನ್ನು ಈ ಸಂಸ್ಥೆಯಲ್ಲಿರುವವರಿಂದ ದೇಶಸೇವೆ ಮಾಡುವದು ಸಾಧ್ಯವಿಲ್ಲೆಂದರಿತು ಲೋಕಮಾನ್ಯರು ತಮ್ಮ ಕೆಲಸಕ್ಕೆ ರಾಜೀನಾಮೆ ಕೊಟ್ಟರು.

ಟಿಳಕರು ಡೆಕ್ಕನ್ ಎಜ್ಯುಕೇಶನ್ ಸೊಸಾಯಿಟಿಯಿಂದ ಬೇರೆಯಾದರು. 'ಕೇಸರೀ' ಮತ್ತು 'ಮರಾಠಾ' ವೃತ್ತ ಪತ್ರಿಕೆಗಳ ಮುಖಾಂತರ ಜನರಿಗೆ ಶಿಕ್ಷಣ ಕೊಡುತ್ತಿದ್ದರು. 'ಕೇಸರೀ' ಪತ್ರವು ಬಹಳ ಪ್ರಸಿದ್ಧವಾಯಿತು. ಅದರ ಚಂದಾದಾರರ ಸಂಖ್ಯೆಯು ಉಳಿದ ಎಲ್ಲ ಪತ್ರಿಕೆ

ಗಳಿಂತಲೂ ಹೆಚ್ಚಾಗಿತ್ತು. 'ಕೇಸರೀ' ಪತ್ರಿಕೆಯಲ್ಲಿ ಟಿಳಕರ ಲೇಖಗಳೆಲ್ಲವೂ ಪ್ರಕಟವಾಗುತ್ತಿದ್ದವು. ತಮ್ಮ ಜೀವಮಾನದಲ್ಲೆಲ್ಲ ಟಿಳಕರು ಪತ್ರಿಕೋದ್ಯೋಗಿಯಾಗಿ ದೇಶಸೇವೆ ಮಾಡಿದರು. ಪತ್ರಿಕೆಯಿಂದ ಹಣ ಗಳಿಸಬೇಕೆಂದು ಅವರು ಎಂದೂ ಆಶೆಪಡಲಿಲ್ಲ.

ಜನರಲ್ಲಿ ನವಜಾಗೃತಿಯನ್ನುಂಟುಮಾಡುವದಕ್ಕಾಗಿ 'ಶಿವಾಜಿ' ಮತ್ತು 'ಗಣಪತಿ' ಉತ್ಸವಗಳನ್ನು ಬಳಿಕೆಯಲ್ಲಿ ತಂದರು. ಜನರಲ್ಲಿ ದೇಶಾಭಿಮಾನ ಉಂಟಾಗುವದಕ್ಕಾಗಿ ಪ್ರಯತ್ನಿಸಿದರು

೧೮೯೬-೯೭ರಲ್ಲಿ ಪ್ಲೇಗು ಮತ್ತು ಮಹಾ ಕ್ಷಾಮಗಳು ತಲೆದೋರಿದವು ಟಿಳಕರು ರೈತರನ್ನು ಎಚ್ಚರಿಸಿ ಮಹಾಕ್ಷಾಮ ಉಂಟಾಗಿರುವಾಗ ತೆರಿಗೆ ಕೊಡುವದು ಹೇಗೆ ಸಾಧ್ಯವಾದೀತು ? ಎಂದು 'ಕೇಸರೀ' ಪತ್ರಿಕೆಯಲ್ಲಿ ಬರೆದರು. ಪ್ಲೇಗಿನ ಬಗ್ಗೆ ಸರಕಾರವು ಅನುಸರಿಸಿದ ಧೋರಣವನ್ನು ಬಲವಾಗಿ ಖಂಡಿಸಿದರು. ಕೆಲವು ಜನರು ರೊಚ್ಚಿಗೆದ್ದು 'ರ್‍ಯಾಂಡ' ಸಾಹೇಬನ ಕೊಲೆ ಮಾಡಿದರು. ಟಿಳಕರು ಕೇಸರಿಯಲ್ಲಿ ಬರೆದ ಲೇಖಗಳಿಂದ ಪ್ರೇರಿತರಾಗಿ ಜನರು ರ್‍ಯಾಂಡಸಾಹೇಬನ ಕೊಲೆಗೆಯ್ದರೆಂದು ಸರಕಾರವು ಟಿಳಕರಿಗೆ ೧॥ ವರ್ಷ ಕಠಿಣ ಶಿಕ್ಷೆ ವಿಧಿಸಿತು. ಅಂದಿನಿಂದ ಜನರು ಟಿಳಕರ ನಿಸ್ಪೃಹ ವೃತ್ತಿಯನ್ನೂ ಸ್ವದೇಶಾಭಿಮಾನವನ್ನೂ ಕಂಡು ಅವರನ್ನು "ಲೋಕಮಾನ್ಯ"ರೆಂದು ಕರೆದರು ಸೆರೆಮನೆಯಲ್ಲಿರುವಾಗ "ಆರ್ಯರ ಮೂಲವಸತಿಸ್ಥಾನ" ಎಂಬ ಪುಸ್ತಕ ಬರೆದರು.

೧೯೦೮ರಲ್ಲಿ ಇಬ್ಬರು ಆಂಗ್ಲರ ಕೊಲೆಯಾಯಿತು ಟಿಳಕರು ಅದರ ಬಗ್ಗೆ ಲೇಖ ಬರೆದು ಹೀಗೆ ಕೊಲೆ ಮಾಡುವದು ಹೇಡಿತನವೆಂದು ಖಂಡಿಸಿದರು. ಆದರೆ ಸರಕಾರಕ್ಕೆ ಟಿಳಕರನ್ನು ಸೆರಮನೆಗೆ ಕಳಿಸಬೇಕಾಗಿತ್ತು. ಅದಕ್ಕಾಗಿ ಅವರ ಮೇಲೆ ಇಲ್ಲದ ತಪ್ಪು ಹೊರಿಸಿ ಅವರಿಗೆ ೬ ವರ್ಷ ಕಠಿಣ ಶಿಕ್ಷೆ ವಿಧಿಸಿದರು. ಲೋಕಮಾನ್ಯರು ೬ ವರ್ಷಗಳ ವರೆಗೆ ಮಂಡಾಲೆಯ ಸೆರಮನೆಯಲ್ಲಿದ್ದರು. ಈ ಸೆರಮನೆಯಲ್ಲಿರುವಾಗಲೇ ಅವರು 'ಗೀತಾರಹಸ್ಯ' ಎಂಬ ಸುಪ್ರಸಿದ್ಧವಾದ ಗ್ರಂಥವನ್ನು ಬರೆದರು.

೧೯೧೬ ರಲ್ಲಿ ಟಿಳಕರ ೬೧ನೇ ಹುಟ್ಟುಹಬ್ಬದ ಸವಿನೆನಪಿಗಾಗಿ ಸಾರ್ವಜನಿಕರು ೧೦೦೦೦೦ ರೂ. ಗಳನ್ನು ಕೊಟ್ಟರು. ಆದರೆ ಟಿಳಕರು ಆ ಹಣ

ವನ್ನು ತಮಗಾಗಿ ತೆಗೆದುಕೊಳ್ಳದೆ ತಮ್ಮ ಕೈಯಿಂದ ಕೆಲವೊಂದು ಹಣ ವನ್ನು ಅದರಲ್ಲಿ ಕೂಡಿಸಿ ಭಾರತದ ಬಂಧವಿಮೋಚನೆಗೆ ಅದನ್ನು ಖರ್ಚು ಮಾಡಬೇಕೆಂದು ಹೇಳಿದರು.

೧೯೨೦ರಲ್ಲಿ ಲೋಕಮಾನ್ಯರು ದೈವಾಧೀನರಾದರು. ಮಹಾತ್ಮಾ, ಗಾಂಧೀಯವರು ದೇಶದ ತುಂಬ ತಿರುಗಾಡಿ ಒಂದುಕೋಟಿ ರೂಪಾಯಿ ಟಿಳಕ ನಿಧಿಯನ್ನು ಕೂಡಿಸಿ ಅವರ ಧ್ಯೇಯ ಸಾಧನೆಯನ್ನು ಮುಂದರಿಸಿ ದರು.

## ಲಾಲಾ ಲಜಪತರಾಯ

ಲಾಲಾಜಿಯವರು ಶ್ರೇಷ್ಠರಾದ ವಾಗ್ಮಿಗಳು, ಪ್ರತಿಭಾವಂತ ಲೇಖ ಕರು, ಸಮಾಜ ಸುಧಾರಕರು, ರಾಜನೀತಿಜ್ಞರು, ಲೋಕಸೇವಕರು, ಹೆಸ ರಾದ ಪತ್ರಿಕೋದ್ಯೋಗಿಗಳು ಸೇವೆಮಾಡಬೇಕೆಂಬ ಅವರ ಇಚ್ಛೆಯು ಎಂದೂ ಕಡಿಮೆಯಾಗಲಿಲ್ಲ. ಅನೇಕ ಶಿಕ್ಷಣಸಂಸ್ಥೆಗಳಿಗೆ ಅವರು ಜನಕ ರಾಗಿರುವರು

ಲಾಲಾಜಿಯವರು ಪಂಜಾಬಪ್ರಾಂತದಲ್ಲಿರುವ ಢೋಂಡಿಗ್ರಾಮದಲ್ಲಿ ೧೮೬೫ರಲ್ಲಿ ಹುಟ್ಟಿದರು

ವಕೀಲಿಪರೀಕ್ಷೆ ಪಾಸಾದಬಳಿಕ ೧೮೮೬ರಲ್ಲಿ ಹಿಸಾರ ಎಂಬಲ್ಲಿ ವಕೀಲಿ ಯನ್ನು ಸುರುವು ಮಾಡಿದರು ಆದರೂ ಸಾರ್ವಜನಿಕ ಕೆಲಸದಲ್ಲಿಯೂ ಮುಂದಾದರು; ಹಿಸಾರ ನಗರಸಭೆಯ ಕಾರ್ಯದರ್ಶಿಗಳಾದರು. ಲೆಫ್ಟನೆಂಟ ಗವ್ಹರನರನು ಹಿಸಾರಕ್ಕೆ ಬಂದನು ನಗರಸಭೆಯವರು ಇಂಗ್ಲೀಷಿನಲ್ಲಿ ಮಾನಪತ್ರ ಕೊಡಬೇಕೆಂದು ನಿಶ್ಚಯಿಸಿದರು ಆದರೆ ಲಾಲಾಜಿಯವರು ಹಟ ಹಿಡಿದು ಉರ್ದುವಿನಲ್ಲಿಯೇ ಮಾನಪತ್ರವನ್ನು ಓದಿದರು! ಇದು ೧೮೮೬ ಇಸ್ವಿಯ ಸಂಗತಿಯು!

ಮಿತ್ರರ ಆಗ್ರಹದ ಮೇರೆಗೆ ಹಿಸಾರದಿಂದ ಲಾಹೋರಿಗೆ ಬಂದರು. ೧೮೯೩ ರಲ್ಲಿ ದಯಾನಂದ ವೈದಿಕ ಕಾಲೇಜಿನಲ್ಲಿ ಪ್ರಾಧ್ಯಾಪಕರಾದರು

ಅದರ ಕಾರ್ಯದರ್ಶಿಗಳಾಗಿಯೂ ಕೆಲಸ ಮಾಡಿದರು. ೧೯೧೧ ರಲ್ಲಿ 'ಪಂಜಾಬ ಶಿಕ್ಷಣ ಮಂಡಲ' ವೆಂಬ ಸಂಸ್ಥೆಯನ್ನು ಸ್ಥಾಪಿಸಿದರು.

೧೮೯೬ ರಲ್ಲಿ ಉತ್ತರ ಭಾರತದಲ್ಲಿಯೂ, ೧೮೯೯ ರಲ್ಲಿ ರಜಪೂತ ಸ್ತಾನದಲ್ಲಿಯೂ ಭೀಕರ ಬರಗಾಲಗಳು ತಲೆದೋರಿದವು. ಈ ಬರಗಾಲದ ಕಾಲಕ್ಕೆ ಲಾಲಾಜಿಯವರು ಮಾಡಿದ ಸೇವೆಯನ್ನು ಸರಕಾರವೂ ಪ್ರಶಂಸಿಸಿತು. ೧೯೦೭ ರಲ್ಲಿ ಬಿಹಾರದಲ್ಲಿ ಬರಗಾಲ ಬಿದ್ದಾಗಲೂ ಲಾಲಾಜಿಯವರು ಬಡವರ ಸೇವೆಯಲ್ಲಿ ತಲ್ಲೀನರಾದರು. ಇದರಿಂದ ಲಾಲಾಜಿಯವರು ಉತ್ತರ ಹಿಂದುಸ್ತಾನದ ನಾಯಕರಾದರು.

ರಾಷ್ಟ್ರೀಯ ಮಹಾಸಭೆಯಲ್ಲಿ ಎಲ್ಲಕ್ಕೂ ಮೊದಲು ಉರ್ದುವಿನಲ್ಲಿ ಮಾತನಾಡಿದವರೆಂದರೆ ಇವರೇ. ತಮ್ಮ ೨೩ನೇ ವಯಸ್ಸಿನಲ್ಲಿ ಮಹಾಸಭೆಯಲ್ಲಿ ಭಾಷಣ ಮಾಡಿದರು ! ಮಹಾಸಭೆಯು ಭಾರತದ ಔದ್ಯೋಗಿಕ ಹಾಗೂ ಶೈಕ್ಷಣಿಕ ಕಾರ್ಯಗಳಲ್ಲಿ ಹೆಚ್ಚು ಲಕ್ಷ್ಯಕೊಡಬೇಕೆಂದು ಹೇಳಿದರು. ೧೯೧೪ ಹಾಗೂ ೧೯೧೧ ರಲ್ಲಿ ಯುದ್ಧ ಶುರುವಾದ್ದರಿಂದ ಸರಕಾರವು ಲಾಲಾಜಿಯವರನ್ನು ಹಿಂದುಸ್ತಾನಕ್ಕೆ ಬರಗೊಡಲಿಲ್ಲ. ಲಾಲಾಜಿಯವರು ಅಮೇರಿಕೆಗೆ ಪ್ರಯಾಣ ಬೆಳೆಸಿ ಅಲ್ಲಿ ಐದೂವರೆ ವರ್ಷ ಇದ್ದರು. ಭಾರತದ ಬಗ್ಗೆ ಅನೇಕ ಪುಸ್ತಕಗಳನ್ನು ಬರೆದರು. ವೃತ್ತಪತ್ರಿಕೆಗಳಲ್ಲಿ ಲೇಖ ಬರೆದರು. ಯಂಗ ಇಂಡಿಯಾ ಪತ್ರಿಕೆಯನ್ನು ಹೊರಡಿಸಿದರು. ೧೯೨೦ರಲ್ಲಿ ಮರಳಿ ಭಾರತಕ್ಕೆ ಬಂದರು.

೧೯೨೦ರಲ್ಲಿ ಕೂಡಿದ ರಾಷ್ಟ್ರೀಯ ಮಹಾಸಭೆಯ ಅಧ್ಯಕ್ಷರಾದರು. ಲಾಲಾಜಿಯವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಲೋಕಮಾನ್ಯರ ಮರಣದಿಂದ ದೇಶಕ್ಕಾದ ಹಾನಿಯನ್ನು ವರ್ಣಿಸಿದರು. ಪಂಜಾಬದ ಹತ್ಯಾಕಾಂಡಕ್ಕೆ ಒಡ್ವಾಯರನೇ ಕಾರಣವೆಂದು ಸಾರಿದರು. ಗಾಂಧೀಜಿಯವರು ಈ ಸಮ್ಮೇಲನದಲ್ಲಿಯೇ ಸತ್ಯಾಗ್ರಹ ಗೊತ್ತುವಳಿಯನ್ನು ಪಾಸು ಮಾಡಿಕೊಂಡರು. ಈ ಚಳವಳಿಯು ಯಶಸ್ವಿಯಾಗುವದು ಕಠಿಣವೆಂದು ಲಾಲಾಜಿಯವರು ನುಡಿದರು. ಆದರೆ ನಾಗಪೂರ ಅಧಿವೇಶನದಲ್ಲಿ ಅಸಹಕಾರದ ಆಂದೋಲನವನ್ನು ಹೂಡಬೇಕೆಂಬ ಮಸೂದೆಯು ಪಾಸಾದ

ಕೂಡಲೇ ಸತ್ಯಾಗ್ರಹದಲ್ಲಿ ಧುಮುಕಿದರು. ತಾವೇ ಕಟ್ಟಿದ ದಯಾನಂದ ಕಾಲೇಜದ ಎದುರಿನಲ್ಲಿ ಪಿಕೆಟಿಂಗ ಮಾಡಿದರು. ರಾಷ್ಟ್ರೀಯ ವಿದ್ಯಾಲಯಗಳನ್ನು ತೆರೆದರು.

೧೯೨೧ ರಲ್ಲಿ ಸರಕಾರವು ಕುಂಟು ನೆವ ಮಾಡಿ ಲಾಲಾಜಿಯವರನ್ನು ಬಂಧಿಸಿ ಅವರಿಗೆ ೧೮ ತಿಂಗಳ ಕಠಿಣ ಶಿಕ್ಷೆ ಹಾಗೂ ೫೦೦ ರೂ. ದಂಡ ವಿಧಿಸಿತು. ಹೊರಬಂದಬಳಿಕವೂ ಲಾಲಾಜಿಯವರು ಅದೇ ಕೆಲಸಕ್ಕೆ ನಡೆದರು. ಸರಕಾರವು ಮತ್ತೆ ಬಂಧಿಸಿ ರಾಜದ್ರೋಹದ ಆರೋಪದ ಮೇಲೆ ೨ ವರ್ಷದ ಶಿಕ್ಷೆ ವಿಧಿಸಿತು.

೧೯೨೮ ರಲ್ಲಿ ರಾಷ್ಟ್ರವು ಸಾಯಮನ್ ಕಮೀಶನ್‌ವನ್ನು ಬಹಿಷ್ಕರಿಸಿತು. ಅಕ್ಟೋಬರ ೩೦ ನೇ ತಾರೀಖಿಗೆ ಲಾಹೋರಕ್ಕೆ ಸಾಯಮನ್ ಕಮೀಶನ್ ಬರುವದಿತ್ತು ಸರಕಾರವು ಸಭೆ ಮೆರವಣಿಗೆಗಳನ್ನು ಪ್ರತಿಬಂಧಿಸಿತು. ಲಾಲಾಜಿಯವರು ಸರಕಾರದ ಆಜ್ಞೆಯನ್ನು ಮುರಿದು ಮೆರವಣಿಗೆ ತೆಗೆದರು ಪೋಲೀಸರು ಲಾಠೀಪ್ರಹಾರ ಮಾಡಿದರು ಲಾಲಾಜಿಯವರಿಗೆ ಬಹಳ ಪೆಟ್ಟು ಬಿದ್ದಿತು. ಈ ಪೆಟ್ಟಿನಿಂದ ಹಾಸಿಗೆ ಹಿಡಿದ ಲಾಲಾಜಿಯವರು ತಿರುಗಿ ಏಳಲಿಲ್ಲ. ೧೯೨೮ರಲ್ಲಿ ಮರಣಹೊಂದಿದರು.

## ಮೋತಿಲಾಲ ನೆಹರು

ಮೋತಿಲಾಲರು ಶ್ರೇಷ್ಠರಾದ ವಾದಪಟುಗಳೂ, ಕಾರ್ಯಕರ್ತರೂ, ಪ್ರತಿಭಾಸಂಪನ್ನರೂ ಆಗಿದ್ದರು. ಅವರ ಕಾಯಿದೆ ಪಾಂಡಿತ್ಯವು ಅಗಾಧವಾದುದು. ಇವರು ಅಲ್ಲಾಬಾದ ಹಾಯಕೋರ್ಟಿನ ವಕೀಲರಾಗಿ ಕೈತುಂಬ ಹಣ ಗಳಿಸುತ್ತಿದ್ದರು. ಆದರೆ ೧೯೨೧ ರಲ್ಲಿ ಅಸಹಕಾರ ಆಂದೋಲನದಲ್ಲಿ ಸೇರಿ ಅವರು ವಕೀಲಿಗೆ ಶರಣುಹೊಡೆದರು.

೧೮೮೮ರಲ್ಲಿ ಅಲ್ಲಾಬಾದದಲ್ಲಿ ನೆರೆದ ಕಾಂಗ್ರೆಸ್ಸಿನಲ್ಲಿ ಭಾಗವಹಿಸಿದರು ೧೯೦೭-೧೯೧೨ರಲ್ಲಿ ಜರಗಿದ ಪ್ರಾಂತಿಕ ರಾಜಕೀಯ ಪರಿಷತ್ತುಗಳಿಗೆ ಅಧ್ಯಕ್ಷರಾಗಿದ್ದರು. ಮೋತಿಲಾಲರು ಮಂದಪಕ್ಷಕ್ಕೆ ಸೇರಿದರು. ಇವರು

೭ ವರ್ಷಗಳ ವರೆಗೆ ಸಂಯುಕ್ತಪ್ರಾಂತ ಕಾಂಗ್ರೆಸ ಕಮಿಟಿಯ ಅಧ್ಯಕ್ಷರಾಗಿದ್ದರು. ೧೯೦೯ರಲ್ಲಿ "ಲೀಡರ" ಪತ್ರಿಕೆಯನ್ನು ಹೊರಡಿಸಿದರು. ೧೯೧೦ರಲ್ಲಿ ಮಾಂಟಫೋರ್ಡ ಸುಧಾರಣೆಗಳನ್ನು ಬಹಿಷ್ಕರಿಸಿದರು ೧೯೧೮ರಲ್ಲಿ "ಇಂಡಿಪೆಂಡೆಂಟ" ಎಂಬ ವೃತ್ತಪತ್ರಿಕೆಯನ್ನು ಹೊರಡಿಸಿದರು.

ರೌಲೆಟ ಕಾಯಿದೆಯಿಂದ ಮೋತಿಲಾಲರು ಸಿಟ್ಟಿಗೆದ್ದರು. ಅಮೃತಸರದ ಕೊಲೆಯಿಂದ ಅವರಿಗೆ ಬ್ರಿಟಿಶರಲ್ಲಿದ್ದ ವಿಶ್ವಾಸವೇ ಹಾರಿಹೋಯಿತು. ಮಹಾತ್ಮರು ಹೂಡಿದ ಸತ್ಯಾಗ್ರಹದಲ್ಲಿ ಭಾಗವಹಿಸಿದರು. ರಾಷ್ಟ್ರೀಯ ಮಹಾಸಭೆಯು ಮೋತಿಲಾಲರನ್ನು ಪಂಜಾಬ ವಿಚಾರಣಾ ಕಮಿಟಿಗೆ ಅಧ್ಯಕ್ಷರನ್ನಾಗಿ ನೇಮಿಸಿತು ಕಲಕತ್ತೆಯಲ್ಲಿ ನೆರೆದ ರಾಷ್ಟ್ರೀಯ ಮಹಾಸಭೆಗೆ ಇವರು ಅಧ್ಯಕ್ಷರಾಗಿದ್ದರು. (೧೯೨೮)

# ಚಿತ್ತರಂಜನದಾಸ

ಚಿತ್ತರಂಜನ ದಾಸರು ೧೮೯೦ರಲ್ಲಿ ಬಿ. ಎ. ಪದವಿಯನ್ನು ಸಂಪಾದಿಸಿ ಇಂಗ್ಲಂಡಕ್ಕೆ ಆಯ್. ಸಿ ಎಸ್. ಅಭ್ಯಾಸಕ್ಕೆ ತೆರಳಿದರು. ಆಗ ದಾದಾಭಾಯಿ ನವರೋಜಿಯವರು ಪಾರ್ಲಮೆಂಟಿನ ಚುನಾವಣೆಯಲ್ಲಿ ಭಾಗವಹಿಸಿದ್ದರು. ಚಿತ್ತರಂಜನ ದಾಸರು ಪರೀಕ್ಷೆಯ ಅಭ್ಯಾಸವನ್ನು ಬಿಟ್ಟುಕೊಟ್ಟು, ದಾದಾಭಾಯಿಯವರ ಸಲುವಾಗಿ ಪ್ರಯತ್ನಿಸುವದರಲ್ಲಿಯೇ ಕಾಲ ಕಳೆದುದರಿಂದ ಅವರು ಆಯ್. ಸಿ. ಎಸ್ ಪರೀಕ್ಷೆಯಲ್ಲಿ ತೇರ್ಗಡೆಯಾಗಲಿಲ್ಲ. ೧೮೯೩ರಲ್ಲಿ ಬ್ಯಾರಿಸ್ಟರ ಪರೀಕ್ಷೆ ಪಾಸಾಗಿ ಭಾರತಕ್ಕೆ ಮರಳಿದರು. ಇವರ ತಂದೆಯವರು ಬಹಳ ಉದಾರರಾದುದರಿಂದ ಇವರ ಮನೆಯಲ್ಲಿ ಬಹಳ ಬಡಜನರು ಆಶ್ರಯಕ್ಕಾಗಿ ಬಂದು ನಿಂತಿದ್ದರು. ಆದ್ದರಿಂದ ಇವರ ತಂದೆಯವರಿಗೆ ಬಹಳ ಸಾಲವಾಯಿತು. ಇವರ ಮನೆತನವು ದಿವಾಳಿ ತೆಗೆಯಿತೆಂದು ಕೋರ್ಟಿನಲ್ಲಿ ಘೋಷಿಸಲ್ಪಟ್ಟಿತು. ಚಿತ್ತರಂಜನ ದಾಸರಿಗೆ ಇದನ್ನು ಕಂಡು ಬಹಳ ವಿಷಾದವಾಯಿತು. ಮುಂದೆ ೧೯೧೯ರಲ್ಲಿ ಸಾಲವನ್ನು ತಿರುಗಿ ಕೊಡುವ ಆವಶ್ಯಕತೆಯಿರದಿದ್ದರೂ ತಮ್ಮ ತಂದೆಯ

ಸಾಲವನ್ನು ತೀರಿಸಿದರು ಇವರ ಪ್ರಾಮಾಣಿಕತನವು ಬಂಗಾಲ ಪ್ರಾಂತದ ತುಂಬ ಹಬ್ಬಿತು.

ಚಿತ್ತರಂಜನ ದಾಸರು ಕೇವಲ ರಾಜಕಾರಣಿಗಳಾಗಿರದೆ ವಂಗ ಭಾಷೆಯಲ್ಲಿ ಕವಿಗಳೂ, ಲೇಖಕರೂ ಆಗಿದ್ದರು. ಮಾಲಂಚ, ಮಾಲಾ ಸಾಗರ, ಸಂಗೀತ ಇವು ಅವರ ಕಾವ್ಯಸಂಗ್ರಹಗಳು.

ದಾಸಬಾಬುಗಳು ವಕೀಲಿಯನ್ನು ಶುರುವುಮಾಡಿದ ಕೆಲವು ದಿವಸಗಳಲ್ಲಿಯೇ ಅವರು ಕಾಯಿದೆ ಪಂಡಿತರೆಂದು ಖ್ಯಾತಿಯನ್ನು ಸಂಪಾದಿಸಿದರು. ಅರವಿಂದರ ಖಟ್ಲೆಗಳನ್ನು ಇವರೇ ನಡಿಸಿದರು ೧೯೨೧ರಲ್ಲಿ ಸಾವಿರಾರು ತರುಣರು ಸೆರೆಮನೆ ಸೇರಿದರು. ನೂರಾರು ಜನರು ಶಿಕ್ಷೆ ಅನುಭವಿಸಬೇಕಾಯಿತು. ಈ ಸಮಯದಲ್ಲಿ ನೂರಾರು ಕುಟುಂಬಗಳು ದಾಸರ ಸಹಾಯವನ್ನು ಪಡೆದವು. ಹಳ್ಳಿಗಳ ಉದ್ಧಾರದಿಂದಲೇ ದೇಶದ ಉದ್ಧಾರವೆಂದು ದಾಸರು ತಿಳಿದಿದ್ದರು.

ಮಹಾತ್ಮಾಜಿಯವರು ಕಲಕತ್ತೆಯಲ್ಲಿ ಕೂಡಿದ ರಾಷ್ಟ್ರೀಯ ಮಹಾಸಭೆಯಲ್ಲಿ ಅಸಹಕಾರದ ಆಂದೋಲನ ಹೂಡಬೇಕೆಂಬ ಮಸೂದೆಯನ್ನು ಮಂಡಿಸಿದರು. ಅದಕ್ಕೆ ಲಾಲಾಲಜಪತರಾಯರೂ, ಚಿತ್ತರಂಜನ ದಾಸರೂ ವಿರೋಧಿಸಿದರು. ಆದರೆ ಜನರು ಮಹಾತ್ಮರಿಗೆ ಬೆಂಬಲಕೊಟ್ಟರು ಮುಂದಿನ ವರ್ಷ ನಾಗಪುರದಲ್ಲಿ ರಾಷ್ಟ್ರೀಯ ಮಹಾಸಭೆಯು ಕೂಡಿತು. ಮಹಾತ್ಮಾಜಿಯವರ ಮಸೂದೆಯನ್ನು ಸೋಲಿಸಬೇಕೆಂದು ಚಿತ್ತರಂಜನ ದಾಸರು ಬಂಗಾಲದಿಂದ ೨೫೦ ಜನರನ್ನು ಕರೆದುಕೊಂಡು ನಾಗಪುರಕ್ಕೆ ಬಂದಿದ್ದರು. ಆದರೆ ಮಹಾತ್ಮರ ಜಾಣತನದಿಂದ ಚಿತ್ತರಂಜನ ದಾಸರೇ ಮಹಾತ್ಮರ ಮಸೂದೆಯನ್ನು ಮಂಡಿಸಿದರು ! ಲಾಲಾಜಪತರಾಯರು ಅನುಮೋದನ ಕೊಟ್ಟರು !! ಚೇಷ್ಟೆಯಿಂದ ದಾಸರು “ ನಿಮಗೆ ತಿಂಗಳಿಗೆ ಹತ್ತು ಸಾವಿರ ರೂಪಾಯಿ ಕೊಡುವೆನು ನನ್ನನ್ನು ಬಿಟ್ಟುಬಿಡಿರಿ” ಎಂದು ಮಹಾತ್ಮರನ್ನು ಕೇಳಿದರು. ಗಾಂಧಿಯವರು ನಗುತ್ತ “ನನಗೆ ಹಣ ಬೇಡ ದಾಸರು ಬೇಕು” ಎಂದು ನುಡಿದರು.

೧೯೨೧ ನವ್ಹಂಬರದಲ್ಲಿ ಇಂಗ್ಲಂಡದ ಯುವರಾಜನು ಹಿಂದುಸ್ತಾನಕ್ಕೆ ಬರುವವನಿದ್ದನು. ರಾಷ್ಟ್ರೀಯ ಸಭೆಯು ಯುವರಾಜನ ಸ್ವಾಗತಕ್ಕೆ ಬಹಿಷ್ಕಾರಹಾಕಿತು. ದಾಸರ ಪತ್ನಿಯವರೂ, ಮಗನೂ ಸೆರೆಮನೆ ಸೇರಿದರು. ದಾಸರು ಕಲಕತ್ತೆಯಲ್ಲಿ ಬಹಿಷ್ಕಾರದ ಸಿದ್ಧತೆಯನ್ನು ಜೋರಿನಿಂದ ನಡಿಸಿದರು. ಅಹಮ್ಮದಾಬಾದದ ಕಾಂಗ್ರೆಸ್ಸಿಗೆ ದಾಸರು ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಸರಕಾರವು ಉಪಾಯಗಾಣದೆ ದಾಸರನ್ನು ಬಂಧಿಸಿತು.

ದಾಸರು ಬಂಗಾಲ ಕೌನ್ಸಿಲ್‌ದ ಸಭಾಸದರಾದರು. ದಾಸರು ಮೂರು ಸಾರೆ ಸರಕಾರವನ್ನು ಸೋಲಿಸಿದರು! ೧೯೨೪ ರಲ್ಲಿ ಸರಕಾರದ ವಿರುದ್ಧವಾಗಿ ಅವಿಶ್ವಾಸದ ಗೊತ್ತುವಳಿಯನ್ನು ತಂದು ಪಾಸು ಮಾಡಿದರು. ಗವ್ಹರ್ನರನಾದ ಲಾರ್ಡ ಲಿಟನ್ನರು ಅದನ್ನೆ ಪುನಃ ವಿಚಾರ ಮಾಡುವದಕ್ಕೆ ಕಳಿಸಿಕೊಟ್ಟನು. ದಾಸರು ಲಾರ್ಡ ಲಿಟನ್ನನು ಕೌನ್ಸಿಲ್ಲಿನ ಅಪಮಾನ ಮಾಡಿದನೆಂದು ಹಾಯಕೋರ್ಟಿನಲ್ಲಿ ವ್ಯಾಜ್ಯ ಹೂಡಿದರು. ಹಾಯಕೋರ್ಟು ದಾಸರಂತೆ ತೀರ್ಪು ಕೊಟ್ಟಿತು! ಸರಕಾರದ ಮರ್ಯಾದೆ ಹೋಯಿತೆಂದು ತಿಳಿದು ಗವ್ಹರ್ನರನು ಹಾಯಕೋರ್ಟಿನ ಈ ಅಧಿಕಾರವನ್ನು ಕಸಿದುಕೊಂಡನು.

ದಾಸರು ಮೂರನೇ ಸಾರೆ ಅವಿಶ್ವಾಸದ ಮಸೂದೆಯನ್ನು ಕೌನ್ಸಿಲ್‌ದಲ್ಲಿ ತಂದರು. ಆಗ ದಾಸರು ಬೇನೆಯಿಂದ ಬಳಲುತ್ತಿದ್ದರು ಲಾರ್ಡ ಲಿಟನ್‌ನು ತನ್ನ ವರ್ಚಸ್ಸನ್ನು ಉಪಯೋಗಿಸಬೇಕೆಂದು ಕೌನ್ಸಿಲದಲ್ಲಿ ಬಂದು ಕುಳಿತನು ದಾಸರಿಗೆ ಈ ಸಂಗತಿಯು ತಿಳಿದ ಕೂಡಲೇ ಅವರು ಮಂಚದ ಮೇಲೆ ಮಲಗಿಕೊಂಡೇ ಅಸೆಂಬ್ಲಿಗೆ ಹೋದರು. ದಾಸರಪ್ರಭಾವವು ಸಭೆಯಲ್ಲಿ ಬಿದ್ದದ್ದರಿಂದ ಅವಿಶ್ವಾಸ ಮಸೂದೆಯು ಪಾಸಾಯಿತು. ಲಾರ್ಡ ಲಿಟನ್ನನು ಸಪ್ಪಗಿನ ಮೋರೆ ಮಾಡಿಕೊಂಡು ಮನೆಯ ಹಾದೀ ಹಿಡಿದನು

೧೯೨೨ ರಲ್ಲಿ ಗಯಾದಲ್ಲಿ ಕೂಡಿದ ರಾಷ್ಟ್ರೀಯ ಮಹಾಸಭೆಗೆ ಅಧ್ಯಕ್ಷರಾಗಿದ್ದರು.

ಇವರು ಬಹಳ ದುಡಿಯುತ್ತಿದುದರಿಂದ ಇವರ ಶರೀರಪ್ರಕೃತಿಯು ಕೆಟ್ಟಿತು. ೧೯೨೫ ರಲ್ಲಿ ಡಾರ್ಜಿಲಿಂಗದಲ್ಲಿ ಸ್ವರ್ಗಸ್ಥರಾದರು.

## ಆ್ಯನಿಬಿರ್ಸೆಂಟ

ಆ್ಯನಿಬಿರ್ಸೆಂಟರು ೧೮೪೭ರಲ್ಲಿ ಲಂಡನದಲ್ಲಿ ಜನಿಸಿದರು. ಇವರು ಚಿಕ್ಕವರಿರುವಾಗಲೇ ಜರ್ಮನ್ ಮತ್ತು ಫ್ರೆಂಚ ಭಾಷೆಗಳನ್ನು ಅಭ್ಯಾಸ ಮಾಡಿದರು. ಇವರು ೧೮೬೭ರಲ್ಲಿ ಒಬ್ಬ ಪಾದರಿಯನ್ನು ಮದುವೆಯಾದರು. ಪಾದರಿಯು ಪರಂಪರಾ ಪ್ರಿಯನು. ಆ್ಯನಿಬಿರ್ಸೆಂಟರು ಸ್ವತಂತ್ರ ವ್ಯಕ್ತಿಯವರು. ಅವರು ವಿಚಾರ ಮಾಡದೆ ಯಾವದನ್ನೂ ಕುರುಡು ನಂಬಿಗೆಯಿಂದ ನಂಬುವವರಲ್ಲ. ಆದ್ದರಿಂದ ಗಂಡ ಹೆಂಡರಲ್ಲಿ ತಿಕ್ಕಾಟವು ಶುರುವಾಯಿತು. ಇದು ವಿಕೋಪಕ್ಕೆ ಹೋಗಿ ಕಡೆಗೆ ದಾಂಪತ್ಯ ವಿಚ್ಛೇದನವಾಯಿತು. ಆ್ಯನಿಬಿರ್ಸೆಂಟರು ನಾಸ್ತಿಕರಾಗಿ ತಿರುಗಾಡಿದರು.

೧೮೮೯ ರಲ್ಲಿ ಥಿಯೊಸಫಿಯ ಮೂಲ ಪ್ರವರ್ತಕರಾದ ಬ್ಲೆವಟಸ್ಕಿಯವರ ಪರಿಚಯವಾಯಿತು. ಅವರ ಪರಿಚಯದಿಂದ ಆ್ಯನಿಬಿರ್ಸೆಂಟರ ಜೀವನದಲ್ಲಿ ಕ್ರಾಂತಿಯುಂಟಾಯಿತು. ಆ್ಯನಿಬಿರ್ಸೆಂಟರು ನಾಸ್ತಿಕರಾಗಿದ್ದವರು ಆಸ್ತಿಕರಾದರು.

ಥಿಯಾಸಫಿಯ ಮೂಲ ಪ್ರವರ್ತಕರಾದ ಬ್ಲೇವೇಟಸ್ಕಿಯವರು ಮರಣ ಹೊಂದಿದ ಬಳಿಕ ಥಿಯಾಸಫಿಯನ್ನು ಪ್ರಚಾರ ಮಾಡುವ ಹೊಣೆಯೆಲ್ಲವೂ ಆ್ಯನಿಬಿರ್ಸೆಂಟರ ಮೇಲೆ ಬಿದ್ದಿತು. ಆ್ಯನಿಬಿರ್ಸೆಂಟರು ಆಳವಾದ ಅಭ್ಯಾಸ ಮಾಡಿ ಥಿಯಾಸಫಿಯಲ್ಲಿ ಪಾಂಡಿತ್ಯವನ್ನು ಸಂಪಾದಿಸಿದರು. ಇವರ ಪ್ರಭಾವದಿಂದ ಥಿಯಾಸಫಿ ಪಂಥವು ಎಲ್ಲ ಕಡೆಗೂ ಹಬ್ಬಿಕೊಂಡಿತು. ಯುರೋಪ, ಅಮೇರಿಕಾ, ಆಸ್ಟ್ರೇಲಿಯಾ ಖಂಡಗಳನ್ನು ಸುತ್ತು ಹಾಕಿ ತಮ್ಮ ಅಮೋಘವಾಣಿಯಿಂದ ಥಿಯಾಸಫಿಯು ಪ್ರಚಾರ ಮಾಡಿದರು. ಎಲ್ಲ ಧರ್ಮಗಳೂ ಸತ್ಯದ ಕಡೆಗೆ ನಡೆದಿರುವವು; ದೇವರು ಕಲ್ಯಾಣಕಾ

ರಿಯು; ಆತ್ಮವು ಅಮರವು ಮುಂತಾದವು ಈ ಸಂಗಡದ ಮೂಲ ತತ್ವಗಳು.

ಹಿಂದೂ ಧರ್ಮ ಗ್ರಂಥಗಳನ್ನೆಲ್ಲ ಓದಿಕೊಂಡು ಅದರ ಬಗ್ಗೆ ೨೦ ಉತ್ಕೃಷ್ಟವಾದ ಗ್ರಂಥಗಳನ್ನು ಬರೆದರು ಪಾಶ್ಚಾತ್ಯರಿಗೆ ಭಾರತೀಯ ಸಂಸ್ಕೃತಿಯ ಪರಿಚಯ ಮಾಡಿಕೊಟ್ಟರು. ೧೮೯೮ರಲ್ಲಿ ರಶಿಯದಲ್ಲಿ "ಸೆಂಟ್ರಲ್ ಹಿಂದೂ ಸ್ಕೂಲ" ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಇವರು ತೆಗೆದ ಕಾಲೇಜವು ಮಾಲವೀಯರ ಪ್ರಯತ್ನದಿಂದ "ಹಿಂದೂ ವಿಶ್ವ ವಿದ್ಯಾಲಯ"ವಾಯಿತು.

ಮದ್ರಾಸದಲ್ಲಿ "ಕಾಮನ್ ವೆಲ್ಥ" ಎಂಬ ವೃತ್ತಪತ್ರವನ್ನು ಹೊರಡಿಸಿದರು 'ನ್ಯೂ ಇಂಡಿಯಾ' ದೈನಿಕವನ್ನು ಪ್ರಾರಂಭಿಸಿದರು.

೧೯೧೩ರಿಂದ ಆ್ಯನಿಬಿಝೆಂಟರು ರಾಜಕಾರಣದಲ್ಲಿ ಭಾಗ ತೆಗೆದುಕೊಳ್ಳಹತ್ತಿದರು. ಮಹಾಸಭೆಯು ಕಾರ್ಯಕಾರಿಯಾದ ಸಂಸ್ಥೆಯಾಗುವಂತೆ ಅವರು ಪ್ರಯತ್ನಿಸಿದರು. ೧೯೧೬ರಲ್ಲಿ ಹೋಮರೂಲ ಚಳವಳಿಯನ್ನು ಪ್ರಾರಂಭಿಸಿದರು. ದೇಶದ ತುಂಬ ಹೋಮರೂಲಿನ ಶಾಖೆಗಳು ಉತ್ಪನ್ನವಾದವು. ೧೯೧೭ರಲ್ಲಿ ಸರಕಾರವು ಆ್ಯನಿಬಿಝೆಂಟರನ್ನೂ, ಲೋಕಮಾನ್ಯರನ್ನೂ ಸೆರೆಹಿಡಿಯಿತು. 'ಕಾಮನ್ ವೆಲ್ಥ' ಮತ್ತು 'ನ್ಯೂ ಇಂಡಿಯಾ' ಪತ್ರಿಕೆಗಳನ್ನು ಜಪ್ತ ಮಾಡಿತು. ಜನರು ರೊಚ್ಚಿಗೆದ್ದು ಸತ್ಯಾಗ್ರಹವನ್ನು ಹೂಡಿದರು. ಹಿಂದೂ ಪತ್ರಿಕೆಯ ಸಂಪಾದಕರಾದ ಶ್ರೀನಿವಾಸ ಅಯ್ಯಂಗಾರರೂ ಸಿ ಸಿ. ರಾಮಸ್ವಾಮಿಯವರೂ ಸತ್ಯಾಗ್ರಹ ಮಾಡಲು ಮುಂದೆ ಬಂದರು ಸರಕಾರವು ಆ್ಯನಿಬಿಝೆಂಟರನ್ನು ಬಿಟ್ಟು ಬಿಟ್ಟಿತು. ಕಲಕತ್ತೆಯಲ್ಲಿ ನೆರೆದ (೧೯೧೭) ರಾಷ್ಟ್ರೀಯ ಮಹಾಸಭೆಗೆ ಜನತೆಯು ಇವರನ್ನು ಅಧ್ಯಕ್ಷರಾಗಿ ಆರಿಸಿತು. ರಾಷ್ಟ್ರೀಯ ಮಹಾಸಭೆಗೆ ಹೆಂಗಸು ಅಧ್ಯಕ್ಷರಾದುದು ಇದೇ ಮೊದಲನೇ ಸಾರೆ.

೧೯೧೮ರಿಂದ ಆ್ಯನಿಬಿಝೆಂಟರು ರಾಜಕೀಯ ಸನ್ಯಾಸವನ್ನು ಸ್ವೀಕರಿಸಿದರು. ೧೯೨೫ರಲ್ಲಿ "ಕಾಮನ ವೆಲ್ಥ ಆಫ್ ಇಂಡಿಯಾ" ಎಂಬ ಬಿಲ್ಲನ್ನು ಸಿದ್ಧಪಡಿಸಿ ಅದನ್ನು ಪಾರ್ಲಮೆಂಟನಲ್ಲಿ ಪಾಸುಮಾಡಿಕೊಳ್ಳಲು ಪ್ರಯತ್ನಿಸಿದರು. ಈ ಕಾಯದೆಯಿಂದ ಹಿಂದುಸ್ತಾನಕ್ಕೆ ವಸಾಹತು

ಸ್ವರಾಜ್ಯ ಸಿಗುವದೆಂದು ಅವರು ತಿಳಿದಿದ್ದರು. ಆದರೆ ಇದು ಸಾಧ್ಯವಾಗ ಲಿಲ್ಲ. ೧೯೨೮ರಲ್ಲಿ ಸಾಯಮನ್ ಕಮೀಶನ್‌ದ ಬಹಿಷ್ಕಾರದಲ್ಲಿ ಇವರು ಭಾಗವಹಿಸಿದ್ದರು. ಮುಂದೆ ಕೆಲವು ವರ್ಷಗಳವರೆಗೆ ಥಿಯಾಸಫಿಯ ಕಾರ್ಯಗಳಲ್ಲಿ ಆಸಕ್ತಿ ವಹಿಸಿ ಕೆಲಸ ಮಾಡುತ್ತಿದ್ದರು. ೧೯೩೩ರಲ್ಲಿ ಇವರು ಕ್ರಿಸ್ತವಾಸಿಗಳಾದರು

# ಪಂಡಿತ ಮದನ ಮೋಹನ ಮಾಲವೀಯ

ಮುಂಬಯಿ ಪಟ್ಟಣದಲ್ಲಿ ಲೋಕಮಾನ್ಯರ ಪುಣ್ಯ ತಿಥಿಯ ನಿಮಿತ್ತ ವಾಗಿ ಮೆರವಣಿಗೆ ಹೊರಟಿತ್ತು. ಸರಕಾರವು ಮೆರವಣಿಗೆ ತೆಗೆಯಬಾರ ದೆಂದು ಪ್ರತಿಬಂಧಿಸಿತು. ಮಾಲವೀಯರು ನಿರ್ಬಂಧವನ್ನು ಮುರಿದು ಮೆರವಣಿಗೆಯ ಮುಂಭಾಗದಲ್ಲಿ ನಡೆದರು. ಪೋಲಿಸ ಕಮೀಶನರರು ಹಾದಿ ಯಲ್ಲಿ ಮೆರವಣಿಗೆಯನ್ನು ತಡೆದು “ ನೀವು ಮುಂದೆ ಹೋಗಕೂಡದು ಎಂದರು. ಮಾಲವೀಯರು ಕೂಡಲೇ ‘ ನಾವು ಇಲ್ಲಿಯೇ ನಿಲ್ಲುವೆವು ” ಎಂದರು. ‘ ನೀವು ಎಷ್ಟು ಹೊತ್ತಿನವರೆಗೆ ಇಲ್ಲಿ ನಿಲ್ಲುವಿರಿ ? ’ ‘ ಜೀವ ವಿರುವವರೆಗೆ ’ ಮಾಲವೀಯರು ಬಂಧಿಸಲ್ಪಟ್ಟರು. ಮಾಲವೀಯರಿಗೆ ೧೦೦ ರೂ ದಂಡ ಅಥವಾ ೬ ತಿಂಗಳ ಶಿಕ್ಷೆ ಅನುಭೋಗಿಸಬೇಕೆಂದು ವಿಧಿ ಸಲ್ಪಟ್ಟಿತು. ಮಾಲವೀಯರು ಸೆರೆಮನೆಗೆ ನಡೆದರು. ಆದರೆ ಯಾರೋ ದಂಡವನ್ನು ತುಂಬಿದ್ದರಿಂದ ಮಾಲವೀಯವರ ಬಿಡುಗಡೆಯಾಯಿತು.

ಮಾಲವೀಯರು ಹಿಡಿದ ಕೆಲಸವನ್ನು ಬಿಡುವವರಲ್ಲ. ಬನಾರಸದಲ್ಲಿ ವಿಶ್ವವಿದ್ಯಾಲಯ ಕಟ್ಟಬೇಕೆಂದು ಅವರು ನಿರ್ಣಯಿಸಿದರು. ಅದಕ್ಕಾಗಿ ಕೈತುಂಬ ಗಳಿಸುತ್ತಿದ್ದ ವಕೀಲಿಗೆ ರಾಜೀನಾಮೆ ಕೊಟ್ಟರು ಹಿಂದುಸ್ತಾನದ ತುಂಬ ತಿರುಗಾಡಿ ೫ ವರ್ಷಗಳಲ್ಲಿ ಒಂದು ಕೋಟಿ ರೂಪಾಯಿಗಳನ್ನು ಕೂಡಿಸಿದರು. ಅವರ ಕೆಲಸದಲ್ಲಿ ತೊಂದರೆಗಳೇನು ಕಡಿಮೆಯಾಗಿರಲಿಲ್ಲ. ಆದರೆ ಮಾಲವೀಯರು ಹಿಡಿದ ಕೆಲಸವನ್ನು ಎಷ್ಟು ತೊಂದರೆಗಳು ಬಂದರೂ

ಬಿಡುವವರಾಗಿರಲಿಲ್ಲ. ಮಹಾತ್ಮಾ ಗಾಂಧಿಯವರು ಮಾಲವೀಯರನ್ನು ಭಿಕ್ಷುಕಾಗ್ರೇಸರ (Richest begger of India)ಎಂದು ಕರೆದಿರುವರು. ಹಿಂದೂ ವಿಶ್ವವಿದ್ಯಾನಿಲಯವು ಮಾಲವೀಯರ ಜೀವಂತ ಸ್ಮಾರಕವಾಗಿರುವದು. ಹಿಂದೀ ಭಾಷೆಯು ಹಿಂದೂ ವಿಶ್ವವಿದ್ಯಾಲಯದ ಬೋಧ ಭಾಷೆಯಾಗಬೇಕೆಂದು ಅವರು ಪ್ರಯತ್ನಿಸಿದ್ದರು. ಆದರೆ ಅದು ಅವರ ಜೀವಮಾನದಲ್ಲಿ ಸಾಧ್ಯವಾಗಲಿಲ್ಲ. ಬೇಗನೇ ಅವರ ಗುರಿಯು ಈಡೇರಬಹುದು. ಹಿಂದೂ ವಿಶ್ವವಿದ್ಯಾನಿಲಯವು ಭಾರತದಲ್ಲಿಯೇ ಶ್ರೇಷ್ಠ ವಿಶ್ವವಿದ್ಯಾನಿಲಯವಾಗಬೇಕೆಂದು ಅವರು ಇಚ್ಛಿಸಿದ್ದರು. ಅವರ ಇಚ್ಛೆಯಂತೆ ಇಂದು ಹಿಂದೂ ವಿಶ್ವವಿದ್ಯಾಲಯವು ಭರತಖಂಡದಲ್ಲಿಯೇ ಹೆಸರಾಗಿರುವದು.

ಮಾಲವೀಯರು ಹಿಂದೀ ಸಾಹಿತ್ಯಸಮ್ಮೇಳನದ ಮೊದಲನೇ ಅಧ್ಯಕ್ಷರಾಗಿದ್ದರು. ಸಂಯುಕ್ತ ಪ್ರಾಂತದಲ್ಲಿ ಉರ್ದು ಭಾಷೆ ಪ್ರಬಲವಾಗಿತ್ತು. ಮಾಲವೀಯರ ಪ್ರಯತ್ನದಿಂದಲೇ ಹಿಂದಿಗೆ ಮಹತ್ವವುಂಟಾಯಿತು. ಪ್ರಯಾಗ ಸಾಹಿತ್ಯಕ ಸಭೆಯು ಪ್ರಾರಂಭವಾದದ್ದು ಮಾಲವೀಯರ ಪ್ರಯತ್ನದಿಂದಲೇ.

ಮಾಲವೀಯರು ಶುಚಿವ್ರತರು ಅವರಿಗೆ ಹಿಂದೂ ಧರ್ಮದಲ್ಲಿ ನಿಷ್ಠೆಯಿತ್ತು. ಆದರೆ ಅವರೆಂದೂ ಪರಧರ್ಮದವರನ್ನು ದ್ವೇಷಿಸಲಿಲ್ಲ. ವಿಧವಾವಿವಾಹವನ್ನು ಅವರು ಪುರಸ್ಕರಿಸುತ್ತಿದ್ದರು. ಅವರು ಹಿಂದೂ ಮಹಾಸಭೆಯ ಅಧ್ಯಕ್ಷರಾಗಿದ್ದರು.

ಮಾಲವೀಯರು ಮಂದ ಪಕ್ಷ ಸೇರಿದವರು. ಹಿಂದುಸ್ತಾನವೆಲ್ಲವೂ ಯುವರಾಜನ ಸ್ವಾಗತಕ್ಕೆ ಬಹಿಷ್ಕಾರ ಹಾಕಿದಾಗ ಅವರು ಹಿಂದೂ ವಿಶ್ವವಿದ್ಯಾನಿಲಯದಲ್ಲಿ ಯುವರಾಜನನ್ನು ಸತ್ಕರಿಸಿದರು! ಆದರೆ ಕೆಲವು ದಿವಸಗಳಲ್ಲಿಯೇ ಬ್ರಿಟಿಶರ ಮೇಲಿದ್ದ ಅವರ ವಿಶ್ವಾಸವು ಹಾರಿಹೋಯಿತು. ಸಾಯಮನ್ ಕಮೀಶನ್‌ವನ್ನು ಬಹಿಷ್ಕರಿಸಲು ಮುಂದೆ ಬಂದರು.

೧೯೩೦ ರಲ್ಲಿ ಲಾಹೋರದಲ್ಲಿ ನೆರೆದ ರಾಷ್ಟ್ರೀಯ ಮಹಾಸಭೆಯ ಅಧ್ಯಕ್ಷರಾಗಿದ್ದರು.

---

## ಮೌಲಾನಾ ಮಹಮ್ಮದ ಅಲಿ

೧೮೭೮ ರಲ್ಲಿ ಮಹಮದ ಅಲಿಯವರು ರಾಮಪುರ ಸಂಸ್ಥಾನದ ಪ್ರಸಿದ್ಧ ಮನೆತನದಲ್ಲಿ ಹುಟ್ಟಿದರು. ಅಲೀಗಢದಲ್ಲಿ ಶಿಕ್ಷಣವನ್ನು ಮುಗಿಸಿಕೊಂಡು ಆಯ್. ಸಿ ಎಸ್ ಪರೀಕ್ಷೆಗಾಗಿ ಇಂಗ್ಲಂಡಕ್ಕೆ ಹೋದರು. ಆದರೆ ಪರೀಕ್ಷೆಯಲ್ಲಿ ಅವರು ತೇರ್ಗಡೆಯಾಗಲಿಲ್ಲ. ಬಿ. ಎ. ಆಗಿ ತಿರುಗಿ ಬಂದರು.

ಬಡೋದಾ ಸಂಸ್ಥಾನದಲ್ಲಿ ೧೯೧೦ ರ ವರೆಗೆ ನೌಕರಿಯಲ್ಲಿದ್ದರು. ೧೯೧೯ರಲ್ಲಿ ಕಾಮ್ರೇಡ ಎಂಬ ವೃತ್ತಪತ್ರಿಕೆಯನ್ನು ತೆಗೆದರು. ಅಲೀಗಢ ವಿಶ್ವವಿದ್ಯಾಲಯವನ್ನು ಸ್ಥಾಪಿಸಲು ಬಹಳ ಕಷ್ಟಪಟ್ಟು ಹಣ ಸಂಗ್ರಹ ಮಾಡಿದರು.

ಕಾನಪೂರದಲ್ಲಿ ಬೀದಿಯ ಸಲುವಾಗಿ ಸರಕಾರವು ಮಸೀದೆಯನ್ನು ಕೆಡವಿದರು. ಇದರಿಂದ ಗೊಂದಲವಾಯಿತು ಮಹಮದ ಅಲಿಯವರು ಇದರ ವಿರುದ್ಧವಾಗಿ ಚಳವಳಿ ಹೂಡಿದರು. ಇಂಗ್ಲಂಡಕ್ಕೆ ತೆರಳಿ ನ್ಯಾಯ ಹೂಡಿದರು ಸರಕಾರವು ಇವರ ಮಾತಿಗೆ ಸೋಲಬೇಕಾಯಿತು. ಪುನಃ ಮಸೀದೆಯನ್ನು ಕಟ್ಟಿಸಿ ಕೊಡುವದಾಗಿ ವಚನವಿತ್ತಿತು

೧೯೩೦ ರಲ್ಲಿ ನೆರೆದ ದುಂಡುಮೇಜಿನ ಪರಿಷತ್ತಿಗೆ ಹೋಗಿದ್ದರು. ಸರಕಾರವು ಸ್ವಾತಂತ್ರ್ಯವನ್ನು ಕೊಡದಿದ್ದರೆ ಇಲ್ಲಿಯೇ ನಾನು ಪ್ರಾಣವನ್ನು ಕೊಡಬೇಕಾಗುವದೆಂದು ಹೇಳಿದರು, ಅಂದೇ ಪ್ರಾಣ ಬಿಟ್ಟರು.

ಇವರು ೧೯೨೩ನೇ ಇಸ್ವಿಯಲ್ಲಿ ಕೋಕೋನಾಡದಲ್ಲಿ ರಾಷ್ಟ್ರೀಯ ಮಹಾಸಭೆಯ ಅಧ್ಯಕ್ಷರಾಗಿದ್ದರು

## ರವೀಂದ್ರನಾಥ ಠಾಕೂರ

ರವೀಂದ್ರನಾಥರು ಜನಿಸುವ ಪೂರ್ವದಲ್ಲಿ ಬಂಗಾಲದಲ್ಲಿ ರಾಜಾ ರಾಮಮೋಹನರಾಯನು ಸಾಂಸ್ಕೃತಿಕ ಪುನರುಜ್ಜೀವನವನ್ನು ಮಾಡಿದ್ದನು ಬಂಗಾಲವು ಸಾಹಿತ್ಯ ವಿದ್ಯೆಗಳಲ್ಲಿ ಮುಂದುವರಿಯತೊಡಗಿತ್ತು. ಇಂಥ

ಸಂಧಿ ಕಾಲದಲ್ಲಿ ರವೀಂದ್ರರು ೧೮೬೧ ರಲ್ಲಿ ಜೊರೊಸಂಕೋ ಎಂಬಲ್ಲಿ ಜನ್ಮಿಸಿದರು.

ರವೀಂದ್ರರು ಸಣ್ಣವರಿರುವಾಗ ತೀರ ಅಶಕ್ತರಿದ್ದರು. ಅವರನ್ನು ತಿರುಗಾಡಲು ಹೊರಗೆ ಬಿಡುತ್ತಿದ್ದಿಲ್ಲ. ಚಿಕ್ಕವರಾದ ರವೀಂದ್ರರು ಮೋಡವನ್ನು ನೋಡಿ ಅದನ್ನು ಕಟ್ಟಿಹಾಕಬಹುದೆಂದು ಜಗ್ಗುತ್ತಿದ್ದರು ಅವರು ಸಾಲೆಗೆ ಹೋದ ಬಳಿಕವೂ ವಿದ್ಯೆಯ ಕಡೆಗೆ ಅಷ್ಟು ಲಕ್ಷ್ಯ ಕೊಡಲಿಲ್ಲ. ಅವರ ಲಕ್ಷ್ಯವೆಲ್ಲವೂ ಸೃಷ್ಟಿಸೌಂದರ್ಯದ ಕಡೆಗಿತ್ತು. ಅವರು ತಂದೆಯವರೊಡನೆ ಹಿಮಾಲಯಕ್ಕೆ ಹೋಗುತ್ತಿದ್ದರು. ಹಿಮಾಲಯದ ಸೌಂದರ್ಯವನ್ನು ಕಂಡು ಅದರಲ್ಲಿಯೇ ತಲ್ಲೀನರಾಗುತ್ತಿದ್ದರು.

ತೀರ ಚಿಕ್ಕವರಿರುವಾಗಲೇ ಕೆಲವು ಕವನಗಳನ್ನು ಬರೆದು ಇವು ಹಳೆಯ ಕವಿತೆಗಳೆಂದು ಹೇಳಿದರು. ಮಿತ್ರರು ಇವುಗಳನ್ನು ಕೇಳಿ ಆನಂದಪಟ್ಟರು. ಆದರೆ ಆ ಕವಿತೆಗಳನ್ನು ರವೀಂದ್ರರೇ ಬರೆದವರೆಂದು ತಿಳಿದ ಬಳಿಕ ಅವು ಸುಂದರವಾಗಿಲ್ಲವೆಂದರು! ರವೀಂದ್ರರು ಗುಪ್ತ ನಾಮದಿಂದ ತಮ್ಮ ಕವಿತೆಗಳನ್ನು ಪತ್ರಿಕೆಯಲ್ಲಿ ಪ್ರಕಟಿಗೊಳಿಸಿದರು. ರವೀಂದ್ರರ ಮನೆಗೆ ರಮೇಶಚಂದ್ರ ದತ್ತ, ಬಂಕಿಮಚಂದ್ರ, ಚಟರ್ಜಿ ಮುಂತಾದ ಸಾಹಿತಿಗಳು ಬರುತ್ತಿದ್ದರು. ಅವರು ರವೀಂದ್ರರನ್ನು ಬಹಳ ಪ್ರೀತಿಸುತ್ತಿದ್ದರು. ರವೀಂದ್ರರು ಸಾಲೆಯಲ್ಲಿ ಕಲಿಯುವದಿಲ್ಲವೆಂದು ಬಗೆದು ಮನೆಯಲ್ಲಿ ಒಬ್ಬ ಶಿಕ್ಷಕರನ್ನು ಗೊತ್ತುಮಾಡಿದರು ಆದರೆ ಆ ಶಿಕ್ಷಕರಿಗೆ ಹಾಸ್ಯ ವಿನೋದಗಳ ಪರಿಚಯವೇ ಇರಲಿಲ್ಲ. ಆದ್ದರಿಂದ ರವೀಂದ್ರರಿಗೆ ಶಿಕ್ಷಕನ ಹತ್ತರ ಕುಳಿತು ಅಭ್ಯಾಸ ಮಾಡಲು ಮನಸ್ಸೇ ಆಗುತ್ತಿರಲಿಲ್ಲ. ರವೀಂದ್ರರ ಅಣ್ಣಂದಿರೆಲ್ಲರೂ ದೊಡ್ಡ ದೊಡ್ಡ ಅಧಿಕಾರಿಗಳಾಗಿದ್ದರು. ಇವರು ೧೬ ವರ್ಷದವರಿರುವಾಗಲೇ ಇವರ ಅಣ್ಣಂದಿರು ನಡಿಸುತ್ತಿದ್ದ 'ಭಾರತೀ ಎಂಬ ಪತ್ರಿಕೆಯ ಸಂಪಾದಕ ಮಂಡಲದಲ್ಲಿ ಸೇರಿದರು.

ರವೀಂದ್ರರು ಇಂಗ್ಲಂಡಕ್ಕೆ ತೆರಳಿದರು. ಅಲ್ಲಿಯೂ ಅವರು ಸಾಲೆಯಲ್ಲಿ ಓದಲಿಲ್ಲ. ಸೃಷ್ಟಿ ಸೌಂದರ್ಯವೇ ಅವರ ಅಭ್ಯಾಸವಾಗಿತ್ತು. ಇಂಗ್ಲಂಡದಲ್ಲಿರುವಾಗ ಇಂಗ್ಲೀಷರ ಜೀವನವನ್ನರಿತುಕೊಂಡು ಕೆಲವು

ಲೇಖಗಳನ್ನು ಬರೆದರು. ಇಲ್ಲಿರುವಾಗಲೇ ಇಂಗ್ಲೀಷ ಸಂಗೀತವನ್ನು ಅಭ್ಯಾಸ ಮಾಡಿದರು.

ಭಾರತಕ್ಕೆ ಮರಳಿ ಬಂದ ಬಳಿಕ 'ವಾಲ್ಮೀಕಿ' ಎಂಬ ನಾಟಕವನ್ನು ಬರೆದರು ಮನೆಯಲ್ಲಿ ಈ ನಾಟಕವನ್ನು ಆಡಿ ತೋರಿಸಿದರು. ಅದರಲ್ಲಿ ರವೀಂದ್ರರು ವಾಲ್ಮೀಕಿಯ ಪಾತ್ರವನ್ನು ವಹಿಸಿದ್ದರು.

ರಮೇಶಚಂದ್ರರ ಮನೆಗೆ ಮದುವೆಗಾಗಿ ಹೋಗಿದ್ದರು ಆಗ ಬಂಕಿ ಮಚಂದ್ರ ಚಟರ್ಜಿಯವರೂ ಅಲ್ಲಿಗೆ ಬಂದಿದ್ದರು. ರವೀಂದ್ರರ ಗೀತ ಗಳನ್ನು ಓದಿದ ಬಂಕಿಮಚಂದ್ರ ಚಟರ್ಜಿಯವರು ರವೀಂದ್ರರ ಕೊರಳಲ್ಲಿ ಒಂದು ಹೂಮಾಲೆಯನ್ನು ಹಾಕಿ—ನಿಮ್ಮ ಕವಿತೆಗಳಿಗಾಗಿ ಈ ಸನ್ಮಾನ ವೆಂದರು! ಬಂಕಿಮಚಂದ್ರ ಚಟರ್ಜಿಯವರು ಬಂಗಾಲಿ ಭಾಷೆಯಲ್ಲಿ ಅನೇಕ ಕಾದಂಬರಿಗಳನ್ನು ಬರೆದಿರುವರು. "ವಂದೇ ಮಾತರಂ" ಗೀತೆಯು ಇವರಿಂದಲೇ ರಚಿತವಾಯಿತು

ಇವರು ಬರೆದ "ಗೀತಾಂಜಲಿ"ಗೆ ೧೯೧೩ ರಲ್ಲಿ ನೋಬೆಲ್ ಬಹು ಮಾನ ದೊರೆಯಿತು. ಹಿಂದುಸ್ತಾನದಲ್ಲಿ ಸಾಹಿತ್ಯದಲ್ಲಿ ಮೊದಲನೆ ಬಹು ಮಾನ ಪಡೆದವರಲ್ಲಿ ಇವರೇ ಮೊದಲಿಗರು. ಇವರು ತಮ್ಮ ಗೀತೆಗಳನ್ನು ಮೊದಲು ಬಂಗಾಲಿಯಲ್ಲಿ ಬರೆದು ಹಿಂದುಗಡೆಗೆ ಇಂಗ್ಲೀಷಿಗೆ ಭಾಷಾಂತರಿ ಸಿದರು. ಇವರ ಗೀತಾಂಜಲಿಯಿಂದ ಇವರ ಕೀರ್ತಿಯು ಜಗತ್ತಿನ ತುಂಬ ಹಬ್ಬಿತು. ಬೇರೆ ಬೇರೆ ದೇಶಗಳು ತಮ್ಮಲ್ಲಿಗೆ ಬಂದು ಉಪನ್ಯಾಸ ಕೊಡಲು ಕೇಳಿಕೊಂಡವು. ರವೀಂದ್ರರು ಜಗತ್ತಿನ ಪ್ರಮುಖ ದೇಶಗಳಿಗೆ ಹೋಗಿ ತಮ್ಮ ಸಂದೇಶವನ್ನು ಸಾರಿದರು.

ಸರಕಾರದವರು ರವೀಂದ್ರರಿಗೆ ಸರ್ ಎಂಬ ಬಿರುದನ್ನು ದಯಪಾಲಿ ಸಿದರು. ಪಂಜಾಬದಲ್ಲಿ ಆದ ಅನ್ಯಾಯವನ್ನು ನೋಡಿ ಸರ್ ಬಿರುದನ್ನು ಬಿಟ್ಟು ಬಿಟ್ಟರು! ಜಗತ್ತಿನ ಎಲ್ಲ ರಾಷ್ಟ್ರಗಳು ಸಾಮ್ರಾಜ್ಯದ ಆಸೆಯನ್ನು ಬಿಡದ ಹೊರತು ಶಾಂತಿ ಸ್ಥಾಪಿತವಾಗಲಾರದೆಂದು ಸಾರಿದರು.

ರವೀಂದ್ರರು ಕಲಕತ್ತಾ ವಿಶ್ವವಿದ್ಯಾನಿಲಯದಲ್ಲಿ ಮೊದಲನೇ ಘಟಿಕೋತ್ಸವದಲ್ಲಿ ಬಂಗಾಲಿಯಲ್ಲಿ ಮಾತನಾಡಿದರು. ಭಾರತೀಯರು ತಮ್ಮ ಸಂಸ್ಕೃತಿಯನ್ನು ಮರೆತು ಪರದೇಶದ ಸಂಸ್ಕೃತಿಯ ಗುಲಾಮರಾಗಿರುವದನ್ನು ಕಂಡು ಮರುಗಿದರು. ನಮ್ಮ ಸಂಸ್ಕೃತಿಯು ಇನ್ನುಳಿದ ಯಾವ ಸಂಸ್ಕೃತಿಗಿಂತಲೂ ಕಡಿಮೆಯಾದುದಲ್ಲವೆಂದು ಸಾರಿದರು

'ವಿಶ್ವಭಾರತೀ' ಎಂಬ ವಿದ್ಯಾ ಸಂಸ್ಥೆಯನ್ನು ಸ್ಥಾಪಿಸಿದರು ಋಷಿಗಳಂತೆ ತಪೋವನದಲ್ಲಿ ವಾಸಿಸುತ್ತಿದ್ದರು. ನಮ್ಮ ಶಿಕ್ಷಣವು ನಿರುಪಯೋಗಿಯಾಗಿರುವದೆಂದು ಸಾರಿದರು. ಮೂಢ ನಂಬಿಕೆಗಳನ್ನು ಬೈಲಿಗೆಳೆದರು. ಪ್ರತಿಯೊಬ್ಬನೂ ತನ್ನ ಮಾತೃಭಾಷೆಯ ಸೇವೆ ಮಾಡಬೇಕೆಂದು ಬೋಧಿಸಿ ಅದರಂತೆ ತಾವು ನಡೆದರು ಅವರು ಇಂಗ್ಲೀಷ ಸಾಹಿತ್ಯದಲ್ಲಿ ಬಲ್ಲವರಾಗಿದ್ದರೂ ಅವರಿಗೆ ಇಂಗ್ಲೀಷ ಭಾಷೆಯ ಹುಚ್ಚು ಮೋಹವಿರಲಿಲ್ಲ ಅವರು 'ಗೀತಾಂಜಲಿ' ಯನ್ನು ಮೊದಲು ಬಂಗಾಲಿಯಲ್ಲಿ ಬರೆದುದು ಅವರಿಗೆ ಮಾತೃಭಾಷೆಯ ಬಗ್ಗೆ ಇರುವ ಪ್ರೇಮವನ್ನು ತೋರಿಸುವದು

ಬಂಗಾಲದಲ್ಲಿ ಅವರ ಹಾಡುಗಳು ಮನೆ ಮಾತಾಗಿರುವವು ಅಡವಿಯಲ್ಲಿಯೂ ಅರಮನೆಯಲ್ಲಿಯೂ ಅವರ ಹಾಡುಗಳು ಕೇಳಬರುವವು.

ಮಹಾತ್ಮಾ ಗಾಂಧಿಯವರು ರವೀಂದ್ರರನ್ನು ' ಗುರುದೇವ ' ರೆಂದು ಕರೆದಿರುವರು.

---

# ಪ್ರೊ. ಕರ್ವೆ

ಹೆಂಗಸರು ಗಂಡಸತ್ತರೆ ತಿರುಗಿ ಮದುವೆಯಾಗಕೂಡದು. ಎಂದು ರೂಢಿಯು ಬಳಕೆಯಲ್ಲಿ ಬಂದದ್ದರಿಂದ ಎಷ್ಟೋ ಜನ ಬಾಲಿಕೆಯರು ಅನಾಥರಾದರು ಬಾಲಿಕೆಯರ ವಿವಾಹವು ಬಳಕೆಯಲ್ಲಿತ್ತು ಅವರ ಗಂಡನು ತೀರಿಕೊಂಡರೆ ಅವರ ದುಃಖಕ್ಕೆ ಮಿತಿಯಿಲ್ಲ! ಅವರಿಗೆ ಏನೂ ತಿಳಿಯದ ವಯಸ್ಸಿನಲ್ಲಿ ಮದುವೆಮಾಡುವದು. ಅವರ ಏನೂ ತಪ್ಪಿಲ್ಲದೆ ಅವರಿಗೆ ವೈಧವ್ಯವು ಪ್ರಾಪ್ತವಾಗುತ್ತಿತ್ತು. ಇದನ್ನು ಕಂಡು ಕರ್ವೆಯವರಿಗೆ

ಬಹಳ ದುಃಖವಾಯಿತು. ಸ್ತ್ರೀಯರ ಉದ್ಧಾರಕ್ಕಾಗಿ ಟೊಂಕ ಕಟ್ಟಿದರು. ಎಷ್ಟೋ ಜನ ಬಾಲಿಕೆಯರು ಪ್ರೊ ಕರ್ವೆಯವರ ಪ್ರಯತ್ನದಿಂದ ಸುಖದ ದಿನಗಳನ್ನು ಕಾಣುವಂತಾಯಿತು. ಅವರಿಗೆ ಕೀರ್ತಿ ಬೇಕಾಗಿರಲಿಲ್ಲ. ಅವರಿಗೆ ಸಮಾಜದ ಉದ್ಧಾರ ಬೇಕಾಗಿತ್ತು ಕೀರ್ತಿಯ ಆಶೆಯಿಲ್ಲದೆ ದುಡಿದರು. ಇಂದು ಅವರ ಯತ್ನವು ಸಫಲವಾಗಿದೆ.

ಕರ್ವೆಯವರು ರತ್ನಾಗಿರಿ ಜಿಲ್ಹೆಯಲ್ಲಿ ೧೮೫೮ರಲ್ಲಿ ಜನಿಸಿದರು. ಇವರ ತಂದೆಯವರು ಶ್ರೀಮಂತರಾಗಿರಲಿಲ್ಲ. ಇವರು ಚಿಕ್ಕವರಿರುವಾಗಲೇ ಇವರ ತಂದೆಯವರು ತೀರಿಕೊಂಡರು. ಶಿಷ್ಯವೃತ್ತಿಯನ್ನು ಪಡೆದುಕೊಂಡು ಅಭ್ಯಾಸ ಮಾಡಿದರು. ೧೮೮೪ರಲ್ಲಿ ಬಿ ಎ. ಪದವಿಯನ್ನು ಸಂಪಾದಿಸಿದರು. ಆಗ ಇವರ ವಿವಾಹವಾಯಿತು. ಕರ್ವೆಯವರು ಬಹಳ ನಾಚಿಕೆಯ ಸ್ವಭಾವದವರಾಗಿದ್ದರು ಮುಂದೆ ಕ್ರಾಂತಿಕಾರರಾಗುವರೆಂದು ಯಾರೂ ಭಾವಿಸಿರಲಾರರು

ಮುಂಬಯಿಗೆ ಹೋಗಿ ಶಿಕ್ಷಕರಾದರು ಗೋಪಾಲಕೃಷ್ಣ ಗೋಖಲೆಯವರು ಇವರನ್ನು ಕರೆದು ಫರ್ಗ್ಯೂಸನ್ ಕಾಲೇಜನಲ್ಲಿ ಗಣಿತದ ಪ್ರಾಧ್ಯಾಪಕರೆಂದು ನಿಯಮಿಸಿಕೊಂಡರು ಮೊದಲನೇ ಹೆಂಡತಿಯು ಈ ಸಮಯದಲ್ಲಿ ತೀರಿಹೋದಳು. ವಿಧವೆಯರ ಪರಿಸ್ಥಿತಿಯು ಇವರ ಕಣ್ಣಿಗೆ ಬಿತ್ತು. ತಿರುಗಿ ಮದುವೆಯಾಗುವದಾದರೆ ವಿಧವೆಯರಿಗೆ ಪುನರ್ವಿವಾಹಕ್ಕೆ ಅಪ್ಪಣೆ ದೊರೆಯಬೇಕೆಂದು ಹೆಣಗಾಡಿದರು. ವಿಧುರರು ವಿಧವೆಯರನ್ನೇ ಮದುವೆಮಾಡಿಕೊಳ್ಳಬೇಕೆಂದು ಸಾರಿದರು. ಒಬ್ಬ ವಿಧವೆಯನ್ನೇ ಮದುವೆಯಾದರು. ಈಗ ವಿಧವಾ ವಿವಹವು ಹಳೆಯ ಮಾತಾಗಿದೆ. ಕರ್ವೆಯವರ ಕಾಲದಲ್ಲಿ ಅದು ಮಹಾ ಪಾಪವಾಗಿತ್ತು. ಜನರು ಇವರ ಮೇಲೆ ಬಹಿಷ್ಕಾರ ಹಾಕಿದರು. ಇವರಿಗೆ ಅಕ್ಕ, ತಾಯಿ ಬಂಧುಬಳಗದವರನ್ನು ಭೆಟ್ಟಿಯಾಗುವದೂ ಅಸಾಧ್ಯವಾಯಿತು. ಇದೆಲ್ಲವನ್ನೂ ಕರ್ವೆಯವರು ತಾಳ್ಮೆಯಿಂದಲೇ ಸಹಿಸಿಕೊಂಡರು.

ವಿಧವಾ ವಿವಾಹವನ್ನು ಬಳಕೆಯಲ್ಲಿ ತರುವದಕ್ಕಾಗಿ ಒಂದು ಸಂಸ್ಥೆಯನ್ನು ಸ್ಥಾಪಿಸಿದರು. ಆದರೆ ಅದಕ್ಕೆ ಸಾರ್ವಜನಿಕರ ಬೆಂಬಲ ಸಿಗದ್ದ

ರಿಂದ ಆ ಕೆಲಸವು ನಿಂತು ಹೋಯಿತು. ಸ್ತ್ರೀಯರ ಉದ್ಧಾರಕ್ಕಾಗಿ ಶಿಕ್ಷಣವು ಮಹತ್ವದ್ದೆಂದು ಅವರಿಗೆ ತೋರಿತು. ವಿಧವೆಯರಿಗೆ ಶಿಕ್ಷಣ ಕೊಡುವದಕ್ಕಾಗಿ ಒಂದು ಸಾಲೆಯನ್ನು ತೆರೆದರು, ಇದರಲ್ಲಿ ಸಾಲೆಯನ್ನು ಕಲಿಯಲು ಇಬ್ಬರು ವಿಧವೆಯರು ಮುಂದೆ ಬಂದರು.

ಸ್ತ್ರೀಯರಿಗೆ ಶಿಕ್ಷಣವು ಅವಶ್ಯವಿಲ್ಲವೆಂಬ ಅಭಿಪ್ರಾಯವು ರೂಢಿಯಲ್ಲಿತು. ಕರ್ವೆಯವರು ಹೆಂಗಸರಿಗೆ ಅದರಲ್ಲಿಯೂ ವಿಧವೆಯರಿಗೆ ಶಿಕ್ಷಣ ಕೊಡುವರೆಂಬದನ್ನು ಕೇಳಿ ಸಮಾಜದ ಮುಂದಾಳುಗಳು ರೇಗಿದರು. ಸಮಾಜವು ಯಾವಾಗಲೂ ಸಂಪ್ರದಾಯಪ್ರಿಯವು. ಸುಧಾರಣೆಗಳಿಗೆ ಅದು ಎಂದಿಗೂ ಒಪ್ಪಲಾರದು. ಕರ್ವೆಯವರ ವಿರುದ್ಧವಾಗಿ ಎಲ್ಲ ಕಡೆಗೂ ಪ್ರಚಾರ ನಡೆಯಿತು. ಹೆಂಗಸರಿಗೆ ಶಿಕ್ಷಣ ಕೊಡುವದು ಪಾಪವೆಂದು ಜನರು ಭಾವಿಸಿದ್ದರು. ಗಂಡಸಿನಷ್ಟೇ ಹೆಂಗಸರಿಗೂ ಶಿಕ್ಷಣ ಹೊಂದಲು ಅಧಿಕಾರವಿದೆ ಎಂಬ ಮಾತನ್ನು ಶಾಸ್ತ್ರಕಾರರು ಒಪ್ಪಲಿಲ್ಲ. ಹೆಂಗಸು ಗಂಡಸಿನ ಕೇವಲ ಉಪಭೋಗದ ವಸ್ತು ಎಂಬುದನ್ನು ಕರ್ವೆಯವರು ಅಲ್ಲಗಳೆದರು ಹೆಂಗಸರೂ ಗಂಡಸರೂ ರಥದ ಎರಡು ಗಾಲಿಗಳಿದ್ದಂತೆ. ಒಂದು ಗಾಲಿಯು ಹಿಂದೆ ಉಳಿದರೆ ಮತ್ತೊಂದು ಗಾಲಿಯು ಮುಂದೆ ಹೋಗಲಾರದು. ಅದಕ್ಕಾಗಿ ಸ್ತ್ರೀ ಶಿಕ್ಷಣವು ಅವಶ್ಯವಿದೆಯೆಂದು ಕರ್ವೆಯವರು ಪ್ರತಿಪಾದಿಸಿದರು. ಹಿಂಗಣೆಯಲ್ಲಿ ಸಾಲೆಯನ್ನು ತೆರೆದರು. ಹೆಂಗಸರು ಅಜ್ಞಾನಿಗಳಾದರೆ ಹಿಂದುಸ್ತಾನದ ಅರ್ಧ ಜನಸಂಖ್ಯೆಯೇ ಅಜ್ಞಾನಿಗಳಾದಂತೆ.

ಹೆಂಗಸರಿಗೂ ಗಂಡಸರಿಗೂ ಒಂದೇ ತರದ ಶಿಕ್ಷಣದಿಂದ ಪ್ರಯೋಜನವಿಲ್ಲ. ಹೆಂಗಸು ಮಾಡತಕ್ಕ ಕೆಲಸಗಳು ಬೇರೆ ಗಂಡಸರು ಮಾಡತಕ್ಕ ಕೆಲಸಗಳು ಬೇರೆ ಇಬ್ಬರಿಗೂ ಒಂದೇ ತರದ ಶಿಕ್ಷಣವು ನಮ್ಮ ದೇಶದಲ್ಲಿ ಕೊಡಲಾಗುವದು. ಜಪಾನದಲ್ಲಿ ಹೆಂಗಸರ ಸಲುವಾಗಿ ಬೇರೆ ವಿಶ್ವವಿದ್ಯಾಲಯಗಳಿರುವವು. ಹೆಂಗಸರು ಗಂಡಸರ ಕೂಡ ಸ್ಪರ್ಧೆ ಮಾಡುವ ಕಾರಣವಿಲ್ಲ. ಆದರೆ ತನ್ನ ವ್ಯಕ್ತಿತ್ವವನ್ನು ಬೆಳಸಿಕೊಳ್ಳುವದಕ್ಕೆ ಅವಳಿಗೆ ಪೂರ್ಣ ಅವಕಾಶ ದೊರೆಯಬೇಕು. ಈ ದೃಷ್ಟಿಯಿಂದ ಕರ್ವೆಯವರು ಹೆಂಗಸರಿ

ಗಾಗಿ ಕೇವಲ ಶಾಲೆಯನ್ನು ತೆಗೆದು ತೃಪ್ತರಾಗಲಿಲ್ಲ. ಅವರಿಗೆ ಒಂದು ಬೇರೆ ವಿಶ್ವವಿದ್ಯಾನಿಲಯವನ್ನು ತೆಗೆದರು ಈ ಕೆಲಸವು ಸುಲಭವಾಗಿರಲಿಲ್ಲ. ಈ ಸಂಸ್ಥೆಗೆ ಹಣ ಕೂಡಿಸುವದಕ್ಕಾಗಿ ದೇಶದ ತುಂಬ ತಿರುಗಾಡಿದರು

ನಮ್ಮ ದೇಶದಲ್ಲಿ ಎಲ್ಲ ವಿಷಯಗಳನ್ನು ಇಂಗ್ಲಿಷಿನಲ್ಲಿ ಕಲಿಸುತ್ತಾರೆ. ಇದರಿಂದ ಇಂಗ್ಲಿಷ ಭಾಷೆಯನ್ನು ಕಲಿಯುವದರಲ್ಲಿಯೇ ನಮ್ಮ ಬಹಳ ಕಾಲವು ವ್ಯಯವಾಗುವದು ಇದನ್ನು ತಪ್ಪಿಸುವದಕ್ಕಾಗಿ ಕರ್ವೆಯವರು ಶಿಕ್ಷಣವನ್ನು ಮಾತೃಭಾಷೆಯಲ್ಲಿಯೇ ಕೊಡುವಂತೆ ಮಾಡಿದರು. ಹೆಂಗಸರು ಸಾಂಸ್ಕೃತಿಕ ದೃಷ್ಟಿಯಿಂದ ಗಂಡಸರಿಗೆ ಸಮಾನವಾಗುವಂತೆ ಪ್ರಯತ್ನಿಸಿದರು ಮೊದಲನೇ ಸಾರೆ ಕಾಲೇಜನ್ನು ಪ್ರಾರಂಭಿಸಿದಾಗ ಐದು ವಿದ್ಯಾರ್ಥಿನಿಯರಿದ್ದರು. ಆದರೂ ಕರ್ವೆಯವರು ನಿರಾಶರಾಗಲಿಲ್ಲ.

ಮಾತೃಭಾಷೆಯಲ್ಲಿ ಶಿಕ್ಷಣ ಕೊಡುವದು ಅಸಾಧ್ಯವಾದುದು. ಮಾತೃಭಾಷೆಯಲ್ಲಿ ಪಠ್ಯ ಪುಸ್ತಕಗಳ ಕೊರತೆಯಿದೆ. ನಮ್ಮ ಭಾಷೆಯು ಬೆಳವಣಿಗೆಯಾಗಿಲ್ಲ. ಇಂಗ್ಲಿಷ ಭಾಷೆಗೆ ನಮ್ಮ ಭಾಷೆಯು ಸರಿಯಾಗಬಹುದೇ? ಈ ರೀತಿಯಾಗಿ ಹಲವರು ಆಕ್ಷೇಪವೆತ್ತಿದರು. ಇಂಗ್ಲಿಷ ಭಾಷೆ ಕಲಿಯುವದಕ್ಕೆ ಕರ್ವೆಯವರ ವಿರೋಧವಿರಲಿಲ್ಲ. ಇಂಗ್ಲಿಷ ಭಾಷೆಯನ್ನು ಕಡ್ಡಾಯದ ವಿಷಯವೆಂದು ಕರ್ವೆ ವಿಶ್ವವಿದ್ಯಾನಿಲಯವು ನಿಯಮ ಮಾಡಿರುವದು. ಇಂಗ್ಲಿಷ ಭಾಷೆಯನ್ನು ಕಲಿಯುವದಕ್ಕೆ ಬಹಳ ಕಾಲ ಹಿಡಿಯುವದು ಕಾಲದ ಸದುಪಯೋಗ ಮಾಡಿಕೊಳ್ಳುವದಕ್ಕಾಗಿ ಅವರು ಮಾತೃಭಾಷೆಯ ಮುಖಾಂತರವಾಗಿ ಶಿಕ್ಷಣ ನಡೆಯಲಿ ಎಂದು ಹೇಳಿದರು. ಅವರ ಮಾತನ್ನು ಈಗ ಎಲ್ಲ ಶಿಕ್ಷಣ ತಜ್ಞರೂ ಒಪ್ಪಿಕೊಂಡಿರುವರು.

ಮಕ್ಕಳ ಮಾನಸಶಾಸ್ತ್ರ, ಶರೀರಶಾಸ್ತ್ರ, ಗೃಹವಿಜ್ಞಾನ ಮುಂತಾದ ವಿಷಯಗಳ ಕಡೆಗೆ ಹೆಚ್ಚು ಲಕ್ಷ ಕೊಡುವದು ಅವಶ್ಯವು ಇವು ಹೆಂಗಸರಿಗೆ ಬಹಳ ಉಪಯುಕ್ತವಾದವುಗಳು. ಆದ್ದರಿಂದ ಕರ್ವೆ ವಿಶ್ವವಿದ್ಯಾನಿಲಯವು ಇವುಗಳಿಗೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿರುವದು. ಮನೆಯನ್ನು ಆದರ್ಶ ಜೀವನದಿಂದ ಬಾಳಲು ಯೋಗ್ಯವಾದ ಸ್ಥಳವಾಗುವಂತೆ ಮಾಡು

ವದು ಹೆಂಗಸರ ಕೈಯಲ್ಲಿರುವದು. ಮಗುವು ತಾಯಿಯನ್ನು ಎಲ್ಲ ರೀತಿಯಿಂದಲೂ ಅನುಕರಿಸುವದು. ತಾಯಿಯು ಸುಶಿಕ್ಷಿತಳಾಗಿದ್ದರೆ ಮಾತ್ರ ಮಗುವು ಒಳ್ಳೇ ಸಂಸ್ಕಾರವನ್ನು ಪಡೆಯುವದು. ಚಿಕ್ಕ ವಯಸ್ಸಿನಲ್ಲಿ ಮಕ್ಕಳು ಕಲಿತದ್ದನ್ನು ಯಾವಾಗಲೂ ನೆನಪಿನಲ್ಲಿಡುವರು. ಅನುಕರಣ ಬುದ್ಧಿಯು ವಿಶೇಷವಾಗಿರುವದು. ಕಂಡದ್ದನ್ನು ಅವು ಅನುಕರಣ ಮಾಡುತ್ತವೆ. ವಾತಾವರಣವು ವ್ಯಕ್ತಿಯ ಚರಿತ್ರೆಯನ್ನು ಬದಲಿಸಬಲ್ಲದು. ಮಗುವಿನ ವ್ಯಕ್ತಿತ್ವಕ್ಕೆ ಪೋಷಕವಾಗುವಂಥ ವಾತಾವರಣವನ್ನು ಉಂಟು ಮಾಡಬೇಕು. ಮಗುವು ಬಹಳ ವೇಳೆಯನ್ನು ತಾಯಿಯ ಸಂಪರ್ಕದಲ್ಲಿ ಕಳೆಯುವದು. ಸುಶಿಕ್ಷಿತಳಾದ ತಾಯಿಯು ಮಗುವಿಗೆ ಶಿಕ್ಷಣವನ್ನು ಕೊಡಬಲ್ಲಳು. ಸ್ತ್ರೀಯರಿಗೆ ಶಿಕ್ಷಣವಿಲ್ಲದಿದ್ದರೆ ನಮ್ಮ ಹುಡುಗರು ಒಳ್ಳೇ ಶಿಕ್ಷಣವನ್ನು ಪಡೆಯುವದು ಕಠಿಣವು.

ಸ್ತ್ರೀಯರ ಉನ್ನತಿಗಾಗಿ ಪ್ರೊ. ಕರ್ವೆಯವರು ಬಹಳ ದುಡಿದಿದ್ದಾರೆ. ತಮ್ಮ ಜೀವನವನ್ನು ತೆಯ್ದಿದ್ದಾರೆ. ಅವರ ಪುಣ್ಯದಿಂದ ನೂರಾರು ವಿಧವೆಯರು ಶಿಕ್ಷಣ ಪಡೆದು ಸುಖದಿಂದ ಕಾಲಕಳೆಯುತ್ತಿರುವರು. ಅವರಿಗೆ ಎಷ್ಟು ತೊಂದರೆಗಳು ಬಂದರೂ ಅವರು ಹಿಂಜರಿಯದೆ ಮುಂದೆ ನಡೆದಿರುವರು. ಹೆಂಗಸರಿಗೆ ಶಿಕ್ಷಣ ಕೊಡುವ ಕಾರ್ಯದಲ್ಲಿ ಯಶಸ್ವಿಗಳಾಗಿರುವರು. ಭಾರತವು ಇಂದು ಸ್ವತಂತ್ರವಾಗಿದೆ. ನಿರಕ್ಷರಿಗಳಾದ ಭಾರತೀಯರು ಸುಶಿಕ್ಷಿತರಾಗದೆ ಪ್ರಜಾಪ್ರಭುತ್ವವು ಯಶಸ್ವಿಯಾಗಲಾರದು. ನಾವೆಲ್ಲರೂ ಕರ್ವೆಯವರಂತೆ ಸ್ತ್ರೀ ಶಿಕ್ಷಣಕ್ಕಾಗಿ ದುಡಿಯಬೇಕಾಗಿದೆ.

## ಅರವಿಂದ ಘೋಷ ೧೮೭೨-೧೯೫೦

ಅರವಿಂದ ಘೋಷರು ಪಾಂಡಿಚೇರಿಗೆ ಹೋದಂದಿನಿಂದ ಅವರ ಜೀವನವು ರಹಸ್ಯಮಯವಾಗಿ ಉಳಿದಿರುವದು. ಅವರು ತಮ್ಮ ಸಲುವಾಗಿ ಏನೂ ಹೇಳಿರುವದಿಲ್ಲ. ಅವರಿಗೆ ಹೇಳಲು ಮನಸ್ಸು ಇದ್ದಿಲ್ಲ. ಮದ್ರಾಸದ ಒಂದು ಪತ್ರಿಕೆಯು ಅವರ ಜೀವನ ಪರಿಚಯ ಮಾಡಿಕೊಡು

ತ್ತಿತ್ತು ಇದು ಅರವಿಂದರ ಮನಸ್ಸಿಗೆ ಬರಲಿಲ್ಲ. ಹಾಗೆ ಮಾಡಕೂಡ ದೆಂದು ಪತ್ರಿಕೆಗೆ ತಿಳಿಸಿದರು. ಅವರಿಗೆ ಕೀರ್ತಿಯ ಆಶೆಯಿಲ್ಲ. ಬಹಳ ದಿವಸಗಳಿಂದ ಮೌನವ್ರತವನ್ನು ಹಿಡಿದಿದ್ದರು ಇದರಿಂದ ಅರವಿಂದರ ವಿಷ ಯವಾಗಿ ಅನೇಕ ಕತೆಗಳು ಹುಟ್ಟಿಕೊಂಡಿವೆ.

ಅರವಿಂದರು ಏಳು ವರ್ಷದವರಿರುವಾಗಲೇ ಅವರ ತಂದೆಯವರು ಅವರನ್ನು ವಿಧ್ಯಾಭ್ಯಾಸಕ್ಕಾಗಿ ಇಂಗ್ಲಂಡಕ್ಕೆ ಕಳಿಸಿದರು. ತನ್ನ ಮಗನು ದೊಡ್ಡ ಸಾಹೇಬನಾಗ ಬೇಕೆಂದು ಅವರ ಮನಸ್ಸಿತ್ತು. ಮ್ಯಾಂಚೆಸ್ಟರ ದಲ್ಲಿಯ ಒಂದು ಇಂಗ್ಲಿಷ ಕುಟುಂಬದಲ್ಲಿ ಇವರು ಇದ್ದರು. ೧೮೮೪ರಲ್ಲಿ ಲಂಡನದಲ್ಲಿ ಸಾಲೆಗೆ ಹೋಗಲಾರಂಭಿಸಿದರು ೧೮೯೦ರಲ್ಲಿ ಶಿಷ್ಯವೃತ್ತಿ ಯನ್ನು ದೊರಕಿಸಿ ಕೆಂಬ್ರಿಜ ವಿಶ್ವವಿದ್ಯಾಲಯವನ್ನು ಸೇರಿದರು. ಅರ ವಿಂದರು ಆಯ್. ಸಿ. ಎಸ್ ಪರೀಕ್ಷೆಗೆ ಕುಳಿತು ಅದರಲ್ಲಿ ತೇರ್ಗಡೆ ಯಾದರು. ಆದರೆ ಕುದುರೆ ಹತ್ತುವದಕ್ಕೆ ಒಪ್ಪದ್ದರಿಂದ ಅವರು ಅಧಿಕಾರಿ ಗಳಾಗಲಿಲ್ಲ. ಬಡೋದೆಯ ಮಹಾರಾಜರನ್ನು ಅರವಿಂದರು ಭೆಟ್ಟಿ ಯಾದರು. ೧೮೯೩ರಲ್ಲಿ ಬಡೋದಾ ಸಂಸ್ಥಾನದಲ್ಲಿ ಒಂದು ಹುದ್ದೆ ಯನ್ನು ದೊರಕಿಸಿ ಇಂಗ್ಲಂಡದಿಂದ ತಿರುಗಿಬಂದರು.

ಬಡೋದಾ ಸಂಸ್ಥಾನದಲ್ಲಿ ೧೩ ವರ್ಷಗಳವರೆಗೆ ದುಡಿದರು, ಮೊದಲು ಕಂದಾಯ ಖಾತೆಯಲ್ಲಿ ಕೆಲಸ ಮಾಡಿದರು. ಕೆಲವು ದಿವಸ ಇಂಗ್ಲಿಷ ಪ್ರಾಧ್ಯಾಪಕರಾಗಿದ್ದರು. ಕೆಲಸ ಬಿಡುವ ವೇಳೆಗೆ ಬರೋಡಾ ಕಾಲೇಜಿನ ವ್ಹಾಯಿಸ-ಪ್ರಿನ್ಸಿಪಾಲರಾಗಿದ್ದರು. ಈ ಕಾಲದಲ್ಲಿಯೇ ಅನೇಕ ಕವಿತೆಗಳನ್ನು ಬರೆದರು. ಬಡೋದೆಯಲ್ಲಿರುವಾಗ ಸಂಸ್ಕೃತ ಭಾಷೆಯನ್ನು ಅಭ್ಯಾಸ ಮಾಡಿದರು. ಅನೇಕ ಭಾರತೀಯ ಭಾಷೆಗಳನ್ನು ಕಲಿತರು. ಬಡೋದೆಯಲ್ಲಿ ಸರಕಾರೀ ನೌಕರಿಯಲ್ಲಿ ಇದ್ದುದರಿಂದ ರಾಜಕೀ ಯದಲ್ಲಿ ಭಾಗ ತೆಗೆದುಕೊಳ್ಳುವದು ಸಾಧ್ಯವಾಗಿರಲಿಲ್ಲ. ೧೯೦೫ರಲ್ಲಿ ಬಂಗಾಲವು ವಿಭಾಗಿಸಲ್ಪಟ್ಟಿತು. ಅರವಿಂದರು ೧೯೦೬. ರಲ್ಲಿ ಬಡೋದೆಯ ಲ್ಲಿಯ ತಮ್ಮ ಕೆಲಸಕ್ಕೆ ರಾಜೀನಾಮೆ ಕೊಟ್ಟು ಬಂಗಾಲಕ್ಕೆ ತೆರಳಿದರು. ಬಂಗಾಲದಲ್ಲಿಯ ಒಂದು ಹೊಸ ಕಾಲೇಜಿನ ಪ್ರಿನ್ಸಿಪಾಲರಾದರು.

ಇಲ್ಲಿಂದ ಅರವಿಂದರ ರಾಜಕೀಯ ಜೀವನಕ್ಕೆ ಮೊದಲಾಯಿತು. ಅರವಿಂದರು ತೀವ್ರಗಾಮಿಗಳ ಸಂಗಡಕ್ಕೆ ಸೇರಿದರು. ತೀವ್ರಗಾಮಿಗಳ ಸಂಗಡಕ್ಕೆ ಲೋಕಮಾನ್ಯ ಟಿಳಕರು ಮುಖಂಡರಾಗಿದ್ದರು. ತೀವ್ರಗಾಮಿಗಳು ಸ್ವರಾಜ್ಯವೇ ತಮ್ಮ ಧ್ಯೇಯವೆಂದು ಸಾರಿದರು. ಬ್ರಿಟಿಶ ಸರಕುಗಳನ್ನು ಬಹಿಷ್ಕರಿಸಿದರು ಕೋರ್ಟುಗಳಿಗೆ ಬಹಿಷ್ಕಾರ ಹಾಕಿದರು. ಹೊಸದಾಗಿ ರಾಷ್ಟ್ರೀಯ ಕಾಲೇಜುಗಳು ಸ್ಥಾಪಿತವಾದವು. ೧೯೦೬ರಲ್ಲಿ ಅರವಿಂದರು ವಂದೇ ಮಾತರಮ್ ಪತ್ರಿಕೆಯ ಸಂಪಾದಕರಾದರು. ೧೯೦೮ ರಲ್ಲಿ ಅದು ನಿಲ್ಲುವವರೆಗೆ ಅರವಿಂದರೇ ಈ ಪತ್ರಿಕೆಗೆ ಮಾರ್ಗದರ್ಶಿಗಳಾಗಿದ್ದರು.

ಸರಕಾರವು ೧೯೦೭ ರಲ್ಲಿ ಇವರನ್ನು ಸೆರೆಹಿಡಿದು ವಿಚಾರಣೆ ಮಾಡಿ ನಿರ್ದೋಷಿಯೆಂದು ಬಿಟ್ಟುಬಿಟ್ಟಿತು. ೧೯೦೮ ರಲ್ಲಿ ಇವರ ತಮ್ಮನಾದ ಬಾರೀಂದ್ರನು ಆಲಿಪುರ ಸಂಚಿನಲ್ಲಿ ಸೇರುವನೆಂದೂ ಅದರಲ್ಲಿ ಇವರ ಸಂಬಂಧವಿರುವದೆಂತಲೂ ತಿಳಿದು ಸರಕಾರವು ಇವರನ್ನು ಮತ್ತೆ ಬಂಧಿಸಿತು. ಈ ಸಾರೆಯೂ ಸಾಕ್ಷಿಗಳು ಇಲ್ಲದ್ದರಿಂದ ೧೯೦೯ ರಲ್ಲಿ ಬಿಡುಗಡೆಯಾಯಿತು. ಇವರ ಬಿಡುಗಡೆಯಾದಾಗ ಕಾಂಗ್ರೆಸ್ಸು ತುಂಡಾಗಿತ್ತು; ಕ್ರಿಯಾಶೂನ್ಯವಾಗಿತ್ತು. ತಿರುಗಿ ಕಾಂಗ್ರೆಸ್ಸಿನ ಪುನರುಜ್ಜೀವನ ಮಾಡಬೇಕೆಂದು ಬಹಳ ಪ್ರಯತ್ನ ಮಾಡಿದರು. ಇಂಗ್ಲಿಷದಲ್ಲಿ ' ಕರ್ಮಯೋಗಿನ್ ' ಮತ್ತು ಬೆಂಗಾಲಿಯಲ್ಲಿ ' ಧರ್ಮ ' ಎಂಬ ಪತ್ರಿಕೆಯನ್ನು ಹೊರಡಿಸಿದರು. ಜನರಲ್ಲಿ ಜಾಗ್ರತೆಯನ್ನುಂಟು ಮಾಡಲು ಪ್ರಯತ್ನಿಸಿದರು. ಆದರೆ ಅದಕ್ಕೆ ಕಾಲವು ಇನ್ನೂ ಹದಗೊಂಡಿರಲಿಲ್ಲ. ಆಲಿಪುರ ಸೆರೆಮನೆಯಲ್ಲಿರುವಾಗ ಇವರು ತಮ್ಮ ವೇಳೆಯನ್ನೆಲ್ಲ ಯೋಗಾಭ್ಯಾಸವನ್ನು ಮುಂದುವರಿಸಬೇಕೆಂದು ಅವರಿಗೆ ಅನಿಸತೊಡಗಿತು.

೧೯೧೦ ರಲ್ಲಿ ಗುಪ್ತವಾಗಿ ಪಾಂಡಿಚೇರಿಗೆ ತೆರಳಿದರು. ಇವರು " ಕರ್ಮಯೋಗಿನ್ " ಪತ್ರಿಕೆಯಲ್ಲಿ ಬರೆದ ಲೇಖನಕ್ಕಾಗಿ ಅದನ್ನು ಮುದ್ರಿಸಿದವರ ಮೇಲೆ ಖಟ್ಲೆ ಹಾಕಿದರು. ಹಾಯಕೋರ್ಟಿನವರು

ಮುದ್ರಣ ಮಾಡಿದವರನ್ನು ನಿರ್ದೋಷಿಯೆಂದು ಬಿಟ್ಟುಬಿಟ್ಟರು. ಅರವಿಂದರು ಬೇಗನೆ ಪಾಂಡಿಚೇರಿಯಿಂದ ತಿರುಗಿ ಬಂದು ರಾಜಕೀಯದಲ್ಲಿ ಭಾಗ ತೆಗೆದುಕೊಳ್ಳುವರೆಂದು ಜನರು ಭಾವಿಸಿದ್ದರು ಆದರೆ ಅರವಿಂದರು ೧೯೧೦ ರಿಂದ ೧೯೫೦ರ ವರೆಗೆ ತಮ್ಮ ಆಶ್ರಮವನ್ನು ಬಿಟ್ಟು ಹೊರಗೆ ಬರಲಿಲ್ಲ. ಯೋಗಾಭ್ಯಾಸದಲ್ಲಿಯೇ ಹೆಚ್ಚು ಹೆಚ್ಚು ಮನಸ್ಸು ಹಾಕ ತೊಡಗಿದರು.

೧೯೧೪ ರಲ್ಲಿ 'ಆರ್ಯ' ಎಂಬ ಪತ್ರಿಕೆಯನ್ನು ಪ್ರಾರಂಭಿಸಿದರು. ಇದರಲ್ಲಿ ತತ್ವಜ್ಞಾನದ ಬಗ್ಗೆ ಅವರ ಲೇಖಗಳು ಪ್ರಕಟವಾಗುತ್ತಿದ್ದವು. ಉಪನಿಷತ್ತು, ಗೀತೆ, ಯೋಗ ಮುಂತಾದ ವಿಷಯಗಳ ಮೇಲೆ ಲೇಖಗಳು ಬಂದವು. ಈಗ ಅವೆಲ್ಲವೂ ಪುಸ್ತಕ ರೂಪದಿಂದ ಪ್ರಕಟವಾಗಿರುವವು ಅರವಿಂದರ ಕವನಗಳು ಈ ಕಾಲದಲ್ಲಿಯೇ ಪ್ರಕಟವಾದವು ಕಾವ್ಯ, ಮುಂಬರುವ ಸಮಾಜ, ವೇದಾಂತದ ನಿಜವಾದ ಅರ್ಥ ಇವುಗಳ ಮೇಲೂ ತನಿಖೆಗಳನ್ನು ಬರೆದರು. ೧೯೨೧ ರಲ್ಲಿ 'ಆರ್ಯ' ಪತ್ರಿಕೆಯು ಬಂದಾಯಿತು. ಈ ಪತ್ರಿಕೆಯಿಂದ ರವೀಂದ್ರರ ಸಂಬಂಧವು ಜಗತ್ತಿಗೆ ಆಗಿತ್ತು. ಈ ಪತ್ರಿಕೆಯು ನಿಂತ ಬಳಿಕ ಅದೂ ನಿಂತಂತಾಯಿತು.

ಮೊದಲು ಅವರ ಆಶ್ರಮದಲ್ಲಿ ನಾಲ್ಕೈದು ಜನರು ಮಾತ್ರ ಇದ್ದರು ಈಗ ಇವರ ಆಶ್ರಮವು ಬಹಳ ಬೆಳೆದಿರುವದು. ಅವರ ಶಿಷ್ಯವೃಂದದಲ್ಲಿ ಅನೇಕ ಜಾತಿಯ ಜನರಿರುವರು- ಮನುಷ್ಯನ ಜೀವನವನ್ನು ದಿವ್ಯ ಜೀವನವನ್ನಾಗಿ ಮಾಡುವದೇ ಇವರ ಗುರಿಯಾಗಿತ್ತು ಜಗತ್ತು ಮಿಥ್ಯಾವಾದದ್ದೆಂದು ಅರವಿಂದರು ತಿಳಿದಿರಲಿಲ್ಲ. ಭೂಮಿಯ ಮೇಲೆ ಸ್ವರ್ಗವನ್ನು ನಿರ್ಮಾಣ ಮಾಡುವದೇ ಅವರ ಬಯಕೆಯಾಗಿತ್ತು. ಹೊಸ ಜಗತ್ತಿನ ನಿರ್ಮಾಣವೇ ಅವರ ಗುರಿಯಾಗಿತ್ತು

ಅರವಿಂದರ ಯುಗವು ಬೇಗನೇ ಪ್ರಾರಂಭವಾಗುವದೆಂದು ಜನರು ಕಾಯುತ್ತಿದ್ದ ಸಮಯದಲ್ಲಿ ೧೯೫೦ ನೇ ಡಿಸೆಂಬರ ತಿಂಗಳಲ್ಲಿ ಅರವಿಂದರು ಕಾಲವಶರಾದರು. ಮಹಾತ್ಮರಾದವರಿಗೆ ಮರಣವಿಲ್ಲ. ಅರ

ವಿಂದರು ತಮ್ಮ ವಿಚಾರಗಳನ್ನು ಇಲ್ಲಿಯೇ ಬಿಟ್ಟು ಹೋಗಿರುವರು. ಅವರ ವಿಚಾರಗಳನ್ನು ಅರಿತುಕೊಂಡು ಅದರಂತೆ ನಡೆಯುವದೇ ಅವರಿಗೆ ಮಾಡಬೇಕಾದ ಸ್ಮಾರಕ.

---

## ಮಹಾತ್ಮಾ ಗಾಂಧಿ

೧೯೪೮ ನೆಯ ಇಸ್ವಿಯ ಜಾನೇವಾರಿ ೩೦ ನೇ ದಿವಸ ಗಾಂಧೀಜಿಯವರು ತಮ್ಮ ಮೊಮ್ಮಕ್ಕಳ ಮೇಲೆ ಕೈಯೂರಿಕೊಂಡು ಪ್ರಾರ್ಥನಾ ಸಭೆಗೆ ಹೋಗುತ್ತಿದ್ದರು. ಆಗ ಒಬ್ಬ ತಲೆತಿರುಕನು ಅಹಿಂಸಾಮೂರ್ತಿಯೂ ಅಜಾತಶತ್ರುವೂ ಆದ ಗಾಂಧೀಜಿಯವರನ್ನು ಗುಂಡಿಕ್ಕಿದನು. ಕೆಲವು ನಿಮಿಷಗಳಲ್ಲಿಯೇ ಗಾಂಧೀಜಿಯವರು ಈ ಜಗತ್ತನ್ನು ಬಿಟ್ಟು ತೆರಳಿದರು ! ಅಮರರಾದರು ! ಜಗತ್ತು ಅಂಧಕಾರದಲ್ಲಿ ಮುಳುಗಿತು ! ಎಲ್ಲ ಕಾರ್ಯಕ್ರಮಗಳು ಮುಂದೂಡಲ್ಪಟ್ಟವು. ಭರತಖಂಡದ ಜನರು ದಿಕ್ಕುಗಾಣದಾದರು. ಜನರು ತಮ್ಮ ತಂದೆಯನ್ನು ಕಳೆದುಕೊಂಡರು ಭಾರತ ದೇಶದ ರವಿಯು ಅಸ್ತಂಗತನಾದನು, ಪಂಡಿತ ನೆಹರು ಅವರು ಆಕಾಶವಾಣಿಯಲ್ಲಿ ಮಾತನಾಡುತ್ತಿರುವಾಗ ಕತ್ತರಿಸುತ್ತಿದ್ದರು ! ಮಹಾತ್ಮರು ಮರಣಹೊಂದಿದರೆಂದು ಕೇಳಿದ ಬಳಿಕವೂ ಜನರು ಈ ಸುದ್ದಿಯನ್ನು ನಂಬದಾದರು. ಮಹಾತ್ಮರು ತಿರುಗಿ ಏಳಬಹುದೆಂದು ಬಿರ್ಲಾರವರ ಮನೆಯ ಸುತ್ತಲೂ ಲಕ್ಷಾಂತರ ಜನರು ನೆರೆದರು ! ಆದರೆ ಮಹಾತ್ಮರು ತಿರುಗಿ ಏಳಲಿಲ್ಲ !

ಮಹಾತ್ಮರ ಮರಣದ ಸುದ್ದಿಯನ್ನು ಕೇಳಿ ದೇಶ ವಿದೇಶಗಳಿಂದ ದುಃಖವನ್ನು ವ್ಯಕ್ತಪಡಿಸುವ ಸಂದೇಶಗಳು ಬಂದವು. ಈ ರೀತಿ ಒಬ್ಬನ ಬಗ್ಗೆ ಜಗತ್ತು ಎಂದೂ ಇಷ್ಟು ಕಣ್ಣೀರು ಸುರಿಸಿರಲಿಲ್ಲ. ಪ್ರತಿಯೊಬ್ಬರೂ ತಮ್ಮ ಸಮೀಪದ ಆಪ್ತನನ್ನು ಕಳೆದುಕೊಂಡಂತೆ ಶೋಕಿಸಿದರು. ಎಷ್ಟೋ ಜನರು ಮಹಾತ್ಮರ ಮರಣದ ಸುದ್ದಿಯನ್ನು ಕೇಳಿ ಮರಣಹೊಂದಿದರು ! ಸರದಾರ ಪಟೇಲರಂತಹ ಉಕ್ಕಿನ ಮನುಷ್ಯರೂ ಕೇಂದ್ರ ಶಾಸನ ಸಭೆಯಲ್ಲಿ ಮಾತನಾಡಲು ಎದ್ದಾಗ ದುಃಖಾಶ್ರುಗಳಿಂದ ಗಂಟಲವು ಉಬ್ಬಿ

ಬಂದು ಮಾತನಾಡದೆ ಕುಳಿತುಬಿಟ್ಟರು ! ರಾಷ್ಟ್ರವು ಸ್ವಾತಂತ್ರ್ಯದಾತನನ್ನು ಕಳೆದುಕೊಂಡಿತು.

ಸತ್ಯವೇ ಅವರ ದೇವರು. ಮಹಾತ್ಮಾಜಿಯವರು ತಮ್ಮ ಚರಿತ್ರ ಗ್ರಂಥಕ್ಕೆ 'ಸತ್ಯಶೋಧನೆ' ಎಂದು ಕರೆದಿರುವರು ! ಅವರು ತಮ್ಮ ಆತ್ಮ ಚರಿತ್ರೆಯಲ್ಲಿ ಯಾವ ಸಂಗತಿಯನ್ನೂ ಬಚ್ಚಿಟ್ಟಿಲ್ಲ. ಆತ್ಮಚರಿತ್ರೆ ಬರೆಯುವವರು ತಮ್ಮ ಚರಿತ್ರೆಯಲ್ಲಿಯ ಲೋಪ-ದೋಷಗಳನ್ನು ಮುಚ್ಚಿಡುವಗು ವಾಡಿಕೆ. ಗಾಂಧೀಜಿಯವರಿಗೆ ಇದು ಸೇರದು. ಸ್ವಾತಂತ್ರ್ಯವೂ ಅವರಿಗೆ ಸತ್ಯಶೋಧನೆ.

ಅವರು ಸಣ್ಣವರಿರುವಾಗ 'ಹರಿಶ್ಚಂದ್ರ' ನಾಟಕ ನೋಡಲು ಹೋಗಿದ್ದರು. ಎಲ್ಲರೂ ಹರಿಶ್ಚಂದ್ರನಂತೆ ಏಕೆ ಸತ್ಯಸಂಧರಾಗಬಾರದೆಂದು ಯೋಚಿಸತೊಡಗಿದರು. ಎಷ್ಟು ಕಷ್ಟಗಳು ಬಂದರೂ ಸತ್ಯವನ್ನು ಬಿಡಲಾರೆನೆಂದು ಪ್ರತಿಜ್ಞೆಗೈದರು. ಅವರು ಇಂಗ್ಲಂಡಕ್ಕೆ ಬ್ಯಾರಿಸ್ಟರ ಪರೀಕ್ಷೆಗಾಗಿ ತೆರಳಿದರು. ತೆರಳುವ ಪೂರ್ವದಲ್ಲಿ ಮದ್ಯ, ಮಾಂಸ, ಮತ್ತು ಆಂಗ್ಲ ಸ್ತ್ರೀಯರನ್ನು ಮುಟ್ಟುವದಿಲ್ಲವೆಂದು ತಾಯಿಗೆ ವಚನ ಕೊಟ್ಟರು. ಅದರಂತೆಯೇ ಅವರು ನಡೆದರು. ಇಂಗ್ಲಂಡದಲ್ಲಿರುವಾಗ ಒಂದು ಕಠಿಣ ಪ್ರಸಂಗವು ಇವರ ಸತ್ವ ಪರೀಕ್ಷೆಯನ್ನು ಮಾಡಿತು. ಇಂಗ್ಲಂಡಕ್ಕೆ ತೆರಳಿದ ಭಾರತೀಯರು ಇಲ್ಲಿ ಮದುವೆಯಾಗಿದ್ದರೂ ಅಲ್ಲಿ ಮದುವೆಯಾಗಿಲ್ಲವೆಂದು ಹೇಳಿ ಆಂಗ್ಲ ತರುಣಿಯರೊಡನೆ ಸ್ನೇಹ ಬೆಳೆಸುತ್ತಿದ್ದರು. ಇಂಗ್ಲಂಡದಲ್ಲಿ ಒಂದು ಆಂಗ್ಲಕುಟುಂಬದಲ್ಲಿ ಗಾಂಧೀಜಿಯವರು ಇದ್ದರು. ಅವರು ತಮ್ಮ ಮಗಳೊಬ್ಬಳನ್ನು ಗಾಂಧೀಜಿಯವರು ಮದುವೆಯಾಗುವರೆಂದು ತಿಳಿದಿದ್ದರು. ಗಾಂಧೀಜಿಯವರು ತಮ್ಮ ಮದುವೆಯಾಗಿದೆಯೆಂದು ತಿಳಿಸಿದರು.

ಇಂಗ್ಲಂಡದಿಂದ ಮರಳಿ ಬಂದ ಬಳಿಕ ದಕ್ಷಿಣ ಆಫ್ರಿಕೆಗೆ ತೆರಳಿದರು. ಅಲ್ಲಿಯ ಭಾರತೀಯರನ್ನು ಒಂದುಗೂಡಿಸಿದರು. ಭಾರತೀಯರ ಹಕ್ಕು ಬಾಧ್ಯತೆಗಳಿಗಾಗಿ ಹೆಣಗಾಡಿದರು. ಬಿಳಿಯರು ಗಾಂಧೀಜಿಯವರ ಮೇಲೆ ಸಿಟ್ಟಿಗೆದ್ದರು. ಒಬ್ಬನು ಗಾಂಧೀಜಿಯವರ ಕೊಲೆ ಮಾಡಲು ಮುಂದೆ ಬಂದನು. ಗಾಂಧೀಜಿಯವರು ಅವನ ಮುಂದೆ ತಮ್ಮ ಎದೆ ತೆರೆದು ನಿಂತರು

ಅವನು ಗಾಂಧೀಜಿಯವರ ಕ್ಷಮೆ ಬೇಡಿದನು. ಅವರು ಎಂದಿಗೂ ಅನ್ಯಾಯಕ್ಕೆ ಬಗ್ಗುವವರಲ್ಲ.

ದಕ್ಷಿಣ ಆಫ್ರಿಕೆಯಿಂದ ಹಿಂದುಸ್ಥಾನಕ್ಕೆ ಬಂದಾಗ ಮುಂದಾಳುಗಳು ಉದ್ದುದ್ದ ಭಾಷಣದಿಂದ ತೃಪ್ತರಾಗುತ್ತಿದ್ದರು. ಗಾಂಧೀಜಿಯವರು ಕಾಂಗ್ರೆಸ್ಸನ್ನು ತಮ್ಮ ಕೈಯಲ್ಲಿ ತೆಗೆದುಕೊಂಡು ಅದರ ಸೂತ್ರಧಾರಿಗಳಾದರು. ಅವರ ಮರಣದ ವರೆಗೂ ಕಾಂಗ್ರೆಸ್ಸು ಅವರ ಸಲಹೆಯಂತೆ ನಡೆಯುತ್ತಿತ್ತು. ಬ್ರಿಟಿಶರಗೂಡ ಅವ್ಯಾಹತವಾಗಿ ಹೋರಾಡಿದರು. ಉಪ್ಪಿನ ಸತ್ಯಾಗ್ರಹವನ್ನು ಹೂಡಿದರು. ಜನರನ್ನು ಜಾಗೃತಗೊಳಿಸಿದರು. ಸತ್ಯ ಅಹಿಂಸೆಯೇ ಅವರ ದಿವ್ಯ ಮಾರ್ಗಗಳು.

ಪ್ರತಿಯೊಬ್ಬ ಭಾರತೀಯನು ಹಿಂದೀ ಭಾಷೆಯನ್ನು ಅಭ್ಯಾಸ ಮಾಡಬೇಕೆಂದು ಹೇಳಿದರು, ಸ್ವತಃ ಹಿಂದೀ ಭಾಷೆಯನ್ನು ಅಭ್ಯಾಸ ಮಾಡಿದ್ದರು. ಖಾದೀ ಮತ್ತು ಹಿಂದೀ ಪ್ರಚಾರಕ್ಕಾಗಿ ದೇಶದ ತುಂಬ ಸಂಘ ಸಂಸ್ಥೆಗಳನ್ನು ಏರ್ಪಡಿಸಿದರು ಹಳ್ಳಿಯ ಉದ್ಧಾರವೇ ಭಾರತದ ಉದ್ಧಾರವೆಂದು ಸಾರಿದರು. ಗ್ರಾಮೋದ್ಯೋಗಗಳಿಗೆ ಸೇವಾಗ್ರಾಮದಲ್ಲಿ ಪ್ರಥಮ ಪ್ರಾಶಸ್ತ್ಯ ಕೊಟ್ಟರು. ಹರಿಜನರ ಸಲುವಾಗಿ ೨೧ ದಿವಸ ಉಪವಾಸ ಮಾಡಿದರು. ಹರಿಜನ ಬಾಲಿಕೆಯನ್ನು ಸ್ವತಃ ತಮ್ಮ ಆಶ್ರಮದಲ್ಲಿ ಇಟ್ಟುಕೊಂಡಿರುವರು.

ಗಾಂಧೀಜಿಯವರಿಗೆ ಪ್ರಾರ್ಥನೆ ಇಲ್ಲದೆ ನಡೆಯುತ್ತಿರಲಿಲ್ಲ. ಲಂಡನ್ನಿಗೆ ಹೋದಾಗಲೂ ಅವರು ದಿನಾಲು ವೇಳೆ ಉಳಿಸಿಕೊಂಡು ಪ್ರಾರ್ಥನೆ ಮಾಡುತ್ತಿದ್ದರು. ಸಂಜೆಯ ಐದು ಗಂಟೆಗೂ ಪ್ರಾರ್ಥನೆ ನಡೆಯಲೇ ಬೇಕು ಒಮ್ಮೆ ಅವರಿಗೆ ಮೂತ್ರ ವಿಕಾರವು ಹೆಚ್ಚಾಯಿತು. ಅದಕ್ಕೆ ಗಾಂಧೀಜಿಯವರು ಒಪ್ಪಲಿಲ್ಲ. ರಾಮನಾಮ ಕಡಿಮೆಯಾದುದಕ್ಕೆ ಹೀಗಾಗಿದೆ ಎಂದು ಹೇಳಿದರು.

ದುಂಡುಮೇಜಿನ ಪರಿಷತ್ತಿಗಾಗಿ ಗಾಂಧೀಜಿಯವರು ಲಂಡನ್‌ಕ್ಕೆ ತೆರಳಿದರು. ಅವರು ಪ್ರವಾಸ ಮಾಡುವದು ಯಾವಾಗಲೂ ಮೂರನೇ ವರ್ಗದಲ್ಲಿ. ಆಗ ಮೈಮೇಲೆ ಎರಡೇ ಅರಿವೆಗಳು ! ಒಂದು ಹೊದೆಯುವ

ಘೋತರ, ಒಂದು ಉಟ್ಟುಕೊಳ್ಳುವ ಪಂಜೆ. ಇಂಗ್ಲಂಡದಲ್ಲಿ ಬಹಳ ಚಳಿ ಬೀಳುವದೆಂದು ಮಹಾತ್ಮಾ ಗಾಂಧಿಯವರ ಮಕ್ಕಳಾದ ದೇವದಾಸ ಗಾಂಧಿಯವರು ಒಂದು ಉಣ್ಣೆಯ ಶಾಲನ್ನು ತೆಗೆದುಕೊಂಡು ಬಂದರು. ಹಡಗದಲ್ಲಿ ಉಣ್ಣೆಯ ಶಾಲನ್ನು ಕಂಡು ಗಾಂಧೀಜಿಯವರು ಚಕಿತರಾದರು.

"ಇದು ಏತಕ್ಕೆ ?" ಎಂದು ದೇವದಾಸರನ್ನು ಕೇಳಿದರು.

"ಇಂಗ್ಲಂಡದಲ್ಲಿ ಬಹಳ ಚಳಿ ಬೀಳುವದು. ಆದ್ದರಿಂದ ತಮಗೆ ಹೊದೆಯುವದಕ್ಕಾಗಿ ಇದನ್ನು ತಂದಿರುವೆನು" ಎಂದು ನುಡಿದರು ದೇವದಾಸರು.

"ನೀವು ನನ್ನ ಮನಸ್ಸನ್ನು ಯಾಕೆ ನೋಯಿಸುವಿರಿ ? ನನ್ನನ್ನು ಕೇಳದೆ ನೀವು ಈ ಶಾಲನ್ನು ಯಾಕೆ ತಂದಿರಿ ? ನಾನು ಬಡ ಹಿಂದೀಯರ ಪ್ರತಿನಿಧಿಯಾಗಿ ಇಂಗ್ಲಂಡಕ್ಕೆ ತೆರಳುತ್ತಿರುವೆನು. ಬಡ ಹಿಂದೀಯರ ಪ್ರತಿನಿಧಿಯಾದ ನಾನು ಶಾಲನ್ನು ಹೇಗೆ ಹೊದೆದುಕೊಳ್ಳಲಿ ? ಇದು ನಾಚಿಕೆಗೇಡಿತನವು ಇದನ್ನು ಈಗಲೇ ಹಡಗದಲ್ಲಿ ಮಾರಿರಿ, ಎಂದರು.

ಆ ಶಾಲನ್ನು ಹಡಗದಲ್ಲಿ ಮಾರಲಾಯಿತು. ಗಾಂಧೀಜಿಯವರು ತಮ್ಮ ಜೀವಮಾನದ ತುಂಬ ದರಿದ್ರ ನಾರಾಯಣನ ಸೇವಕರಾಗಿದ್ದರು. ಅವರಿಗೆ ದೇಶಸೇವೆಯೇ ಈಶ ಸೇವೆಯಾಗಿತ್ತು. ಅವರೆಂದೂ ಐಷಾರಾಮುಗಳನ್ನು ಒಪ್ಪಿಸಿದವರಲ್ಲ. ಜಗತ್ತಿನಲ್ಲಿಯ ಎಲ್ಲ ಸುಖಗಳನ್ನು ಭೋಗಿಸಲು ಅವರಿಗೆ ಸಾಧ್ಯವಿತ್ತು. ಅದನ್ನು ತೊರೆದು ಭಾರತದ ಬಂಧ ವಿಮೋಚನೆಗಾಗಿ ಸೆರಮನೆಯಲ್ಲಿ ತಪಗೈಯ್ದರು. ಅವರ ಆಹಾರವು ತೀರ ಸಾದಾ. ದಿನಾಲು ಐದು ಪದಾರ್ಥಗಳಿಗಿಂತ ಹೆಚ್ಚಿಗೆ ಪದಾರ್ಥಗಳನ್ನು ಅವರು ಮುಟ್ಟುತ್ತಿರಲಿಲ್ಲ. ಅವರು ಪ್ರವಾಸ ಮಾಡುತ್ತಿರುವಾಗ ಒಮ್ಮೆ ಮೈಮೇಲೆ ಅರಿವೆಯಿಲ್ಲದೆ ಗುಡಿಸಲಿನಲ್ಲಿ ಕುಳಿತಿರುವ ಬಡ ಸ್ತ್ರೀಯನ್ನು ಕಂಡರು. ಅಂದಿನಿಂದ ಅವರು ಮೈಮೇಲೆ ಎರಡೇ ಬಟ್ಟೆಗಳನ್ನು ತೊಟ್ಟುಕೊಳ್ಳುವದಾಗಿ ನಿಶ್ಚಯಿಸಿದರು ಎಂಥ ಚಳಿಯಲ್ಲಿಯೂ ಅವರು ತೊಟ್ಟುಕೊಳ್ಳುವದು ಎರಡೇ ಬಟ್ಟೆಗಳು.

ಮಹಾತ್ಮಾ ಗಾಂಧಿಯವರ ಕೊಲೆ ಮಾಡಲು ಬಹಳ ದಿವಸಗಳಿಂದ ಸಂಚು ನಡೆದಿತ್ತು. ಅವರ ಕೊಲೆಯಾಗುವ ಪೂರ್ವದಲ್ಲಿ ಹದಿನೈದು ದಿವಸ ಮೊದಲು ಒಬ್ಬ ಪಂಜಾಬದ ತರುಣನು ಅವರ ಮೇಲೆ ಬಾಂಬು ಒಗೆದನು. ಆದರೆ ಆ ಬಾಂಬು ಅವರಿಗೆ ತಾಕಲಿಲ್ಲ. ಆ ತರುಣನನ್ನು ಕ್ಷಮಿಸಬೇಕೆಂದು ಅವರು ಹೇಳಿದರು! ಯೇಸುಕ್ರಿಸ್ತನು ತನ್ನನ್ನು ಗಲ್ಲಿಗೇರಿಸಲು ಸಿದ್ಧರಾದ ಜನರನ್ನು ಕುರಿತು “ಕ್ಷಮಿಸು ತಂದೆ ಇವರು ಅಜ್ಞಾನಿಗಳು” ಎಂದು ದೇವರನ್ನು ಪ್ರಾರ್ಥಿಸಿದನಂತೆ. ಅವರಿಗೆ ಗುಂಡು ಬಡಿದಾಗಲೂ ಅವರು ಸಿಟ್ಟಿಗೇಳಲಿಲ್ಲ! ಅಪರಾಧಿಯನ್ನು ದಯಾದೃಷ್ಟಿಯಿಂದ ನೋಡಿದರು. ಕೊಲೆಗಡಕನ ಮೇಲೆಯೂ ಅವರಿಗೆ ದ್ವೇಷವಿರಲಿಲ್ಲ! ಅವರು ಮರಣ ಹೊಂದುವಾಗ ಅವರ ಬಾಯಿಂದ ‘ರಾಮ’ ‘ರಾಮ’ ಎಂಬ ಶಬ್ದಗಳು ಹೊರಬಿದ್ದವು! ಅವರು ನೆಲದಮೇಲೆ ಬೀಳುವಾಗ ಕೈ ಜೋಡಿಸಿದ್ದರು!

ಬಂಗಾಲದಲ್ಲಿ ಜಾತೀಯ ದಂಗೆಗಳು ಪ್ರಾರಂಭವಾಗಲು ಅವರ ಮನಸ್ಸಿಗೆ ಬಹಳ ನೋವಾಯಿತು. ಯಾಕಂದರೆ ತಮ್ಮ ಜೀವಮಾನದ ತುಂಬ ಅವರು ಜಾತೀಯ ಐಕ್ಯಕ್ಕಾಗಿ ಕೆಲಸ ಮಾಡಿದರು ಜಾತಿ–ಜಾತಿಗಳಲ್ಲಿ ಸೌಹಾರ್ದವನ್ನುಂಟು ಮಾಡುವದಕ್ಕಾಗಿ ಅವರು ಒಬ್ಬರೇ ಪಾದಸಂಚಾರಿಯಾಗಿ ನೌಖಾಲಿಯಲ್ಲಿ ತಿರುಗಾಡಿದರು ಬಿಹಾರದಲ್ಲಿ ದಂಗೆ ಎದ್ದಾಗ ಅಗ್ನಿಯಲ್ಲಿ ಪ್ರವೇಶ ಮಾಡುವೆನೆಂದು ಸಾರಿದರು. ಉಪವಾಸ ಪ್ರಾರಂಭಿಸಿದರು. ದಂಗೆಯು ಶಾಂತವಾಯಿತು. ಮಹಾತ್ಮರು ಹೋದಲ್ಲೆಲ್ಲ ತಮ್ಮ ಅಲೌಕಿಕವಾದ ಸಾಮರ್ಥ್ಯದಿಂದ ಜಯವನ್ನು ಸಂಪಾದಿಸುತ್ತಿದ್ದರು. ಅವರು ಹೋದಲ್ಲೆಲ್ಲ ಜಾತ್ರೆಯೇ ನೆರೆಯುತ್ತಿತ್ತು.

ಅಮೇರಿಕೆಯಿಂದ ಒಬ್ಬ ಪತ್ರಿಕೋದ್ಯಮಿಯು ಹಿಂದುಸ್ತಾನಕ್ಕೆ ಬಂದನು. ಆಗ ಸುದ್ದಿಗಾರನನ್ನು “ನೀವು ಹಿಂದುಸ್ತಾನಕ್ಕೆ ಬಂದ ಉದ್ದೇಶವೇನು?” ಎಂದು ಕೇಳಿದರು. ಅವನು “ಹಿಂದುಸ್ತಾನದಲ್ಲಿ ಹಿಮಾಲಯ ಪರ್ವತ ತಾಜಮಹಾಲ, ಮಹಾತ್ಮಾಗಾಂಧಿಯವರನ್ನು ನೋಡಲು ಬಂದಿರುವೆನು” ಎಂದು ಹೇಳಿದನು.

ಮಕ್ಕಳ ಮನಸ್ಸು ಬಹು ಪವಿತ್ರವಾದುದು. ದೊಡ್ಡವರು ಹೇಳಿದ್ದೆಲ್ಲವನ್ನೂ ಅವು ನಂಬುವವು. ಚಿಕ್ಕಂದಿನಲ್ಲಿಯೇ ಅವುಗಳಿಗೆ ಒಳ್ಳೇ ಚಟಗಳನ್ನು ಕಲಿಸಬೇಕು ಒಮ್ಮೆ ಹತ್ತಿದ ಚಟಗಳು ಕಡೆತನಕ ಉಳಿಯುವವು. ಸಣ್ಣ ಹುಡುಗರನ್ನು ರಮ್ಮಿಸುವದಕ್ಕಾಗಿ ಹಲವು ಸಾರೆ ನಾವು ಸುಳ್ಳುಹೇಳುವೆವು. ಯಾಕಂದರೆ ಮಕ್ಕಳನ್ನು ಹೇಗಾದರೂ ಮಾಡಿ ಸ್ವಲ್ಪ ಕಾಲದವರೆಗಾದರೂ ಶಾಂತಮಾಡುವದು ನಮಗೆ ಬೇಕಾಗಿರುತ್ತದೆ. ಗಾಂಧೀಜಿಯವರು ಮಕ್ಕಳ ಸಂಗಡ ಸುಳ್ಳು ಮಾತಾಡುವದು ಪಾಪವೆಂದು ತಿಳಿದಿದ್ದರು. ಮಕ್ಕಳೆಂದರೆ ಅವರಿಗೆ ಬಹಳ ಪ್ರೀತಿ ಅವರು ಆಶ್ರಮದಲ್ಲಿಯ ಮಕ್ಕಳಿಗೆ ಹಕ್ಕಿಗಳು ಎಂದು ಹೆಸರಿಟ್ಟಿದ್ದರು ಸಣ್ಣ ಮಕ್ಕಳನ್ನು ಕಂಡಾಗಲೆಲ್ಲ ಪ್ರೀತಿಯಿಂದ ಅವರ ಯೋಗಕ್ಷೇಮವನ್ನು ಕೇಳಿಕೊಳ್ಳುತ್ತಿದ್ದರು. ಮಕ್ಕಳಿಗೆ ಪತ್ರಗಳನ್ನು ಬರೆಯುತ್ತಿದ್ದರು ಇಂದಿನ ಬಾಲಕರೇ ನಾಳಿನ ನಾಗರಿಕರಲ್ಲವೇ? ಅವರನ್ನು ಹೇಗೆ ಅಲಕ್ಷ್ಯ ಮಾಡುವದು?

## ಆಚಾರ್ಯ ಪ್ರಫುಲ್ಲಚಂದ್ರ ರಾಯ

ಆಚಾರ್ಯರು ವಿಜ್ಞಾನದಲ್ಲಿ ಶ್ರದ್ಧೆಯುಳ್ಳವರು. ವಿಜ್ಞಾನದ ಸಹಾಯದಿಂದ ಭಾರತವನ್ನು ಉದ್ಧರಿಸಲು ಹೊರಟವರು. ಇವರಿಗೆ ವಿಜ್ಞಾನವೇ ಗಾಯತ್ರಿ ಮಂತ್ರವು. ಜ್ಞಾನೋಪಾಸನೆಯಲ್ಲಿಯೇ ತಮ್ಮ ಕಾಲವನ್ನು ಕಳೆದರು.

ಇವರ ತಂದೆಯವರು ದೊಡ್ಡ ಜಮೀನುದಾರರಾಗಿದ್ದರು. ಇವರ ಅಜ್ಜಂದಿರು ಶಿರಸ್ತೆದಾರರಾಗಿದ್ದರು. ಆದರೆ ಪ್ರಫುಲ್ಲಚಂದ್ರರು ಹುಟ್ಟುವ ಕಾಲಕ್ಕೆ ಇವರು ಬಹಳ ಆಸ್ತಿಯನ್ನು ಕಳೆದುಕೊಂಡಿದ್ದರು.

ಪ್ರಫುಲ್ಲಚಂದ್ರರಿಗೆ ಇತಿಹಾಸ, ಭೂಗೋಲಗಳಲ್ಲಿ ಬಹಳ ಅಭಿರುಚಿ ಇತ್ತು. ಶಾಲೆಯಕಿಂತಲೂ ತಂದೆಯವರಿಂದಲೇ ಹೆಚ್ಚು ವಿಷಯಗಳನ್ನು ಇವರು ಕಲಿತುಕೊಂಡರು. ಚಿಕ್ಕಂದಿನಿಂದಲೇ ಇವರಿಗೆ ಓದುವ ಅಭಿರುಚಿಯು ಬಹಳವಾಗಿತ್ತು. ತಂದೆಯವರು ಮನೆಯಲ್ಲಿ ಅನೇಕ ಪುಸ್ತಕ

ಗಳನ್ನು ಕೊಂಡು ಇಟ್ಟಿದ್ದರು. ಅವುಗಳೆಲ್ಲವನ್ನು ಇವರು ಸ್ವಲ್ಪದರಲ್ಲಿಯೇ ಓದಿ ಮುಗಿಸಿದರು.

ಕಾಲೇಜಿನಲ್ಲಿರುವಾಗ ಫ್ರೆಂಚ, ಜರ್ಮನಿ, ಮತ್ತು ಸಂಸ್ಕೃತ ಭಾಷೆಗಳನ್ನು ಅಭ್ಯಾಸ ಮಾಡಿದರು. ಬಿ ಎ. ಪರೀಕ್ಷೆಯಾದನೇಲೆ ಇಂಗ್ಲಂಡಕ್ಕೆ ಮುಂದಿನ ಅಭ್ಯಾಸಕ್ಕಾಗಿ ಹೋಗಬೇಕೆಂದು ಇವರ ಇಚ್ಛೆಯಿತ್ತು. ಆದರೆ ಇವರಿಗೆ ಹಣದ ಅನುಕೂಲವಿರಲಿಲ್ಲ. ಶಿಷ್ಯವೃತ್ತಿಯನ್ನು ಸಂಪಾದಿಸಿ ಇಂಗ್ಲಂಡಕ್ಕೆ ತೆರಳಿದರು. ಎಡಿನ್‌ಬರೋ ವಿಶ್ವವಿದ್ಯಾಲಯದಲ್ಲಿ ರಸಾಯನ ಶಾಸ್ತ್ರವನ್ನು ಅಭ್ಯಾಸ ಮಾಡಿದರು ವಿಶ್ವವಿದ್ಯಾಲಯದ ರಸಾಯನ ಶಾಸ್ತ್ರ ಸಂಘದ ಉಪಾಧ್ಯಕ್ಷರಾಗಿದ್ದರು.

'ಸ್ವಾತಂತ್ರ್ಯ ಯುದ್ಧದ ಪೂರ್ವದಲ್ಲಿಯು ಮತ್ತು ನಂತರದ ಹಿಂದುಸ್ತಾನ' ಎಂಬ ವಿಷಯದ ಮೇಲೆ ನಿಬಂಧ ಬರೆದವರಿಗೆ ಒಂದು ಬಹುಮಾನ ಕೊಡುವದಾಗಿ ಲಾರ್ಡ್ ಇಡ್ಲೆಸಿಂಪ್ಸರವರು ಪ್ರಕಟಿಸಿದರು ಪ್ರಫುಲ್ಲಚಂದ್ರರು ಈ ವಿಷಯವಾಗಿ ನಿಬಂಧ ಬರಯಲು ಅಣಿಯಾದರು. ಆ ವಿಷಯದ ಮೇಲಿನ ಎಲ್ಲ ಮಹತ್ವದ ಪುಸ್ತಕಗಳನ್ನು ಓದಿದರು ಇವರು ಬರೆದ ಪುಸ್ತಕವು ವಿದ್ವಾಂಸರ ಮನ್ನಣೆಗೆ ಪಾತ್ರವಾಯಿತು ಆದರೆ ಪ್ರಫುಲ್ಲಚಂದ್ರರಿಗೆ ಬಹುಮಾನವು ದೊರೆಯಲಿಲ್ಲ ಯಾಕೆಂದರೆ ಪ್ರಫುಲ್ಲಚಂದ್ರರು ಬ್ರಿಟಿಷರ ಆಡಳಿತೆಯ ವಿಷಯವಾಗಿ ಕಟು ಟೀಕೆಯನ್ನು ಮಾಡಿದ್ದರು. ಬ್ರಿಟಿಷರು ಇದಕ್ಕೆ ಬಹುಮಾನ ಕೊಡದಿರುವದು ಸ್ವಾಭಾವಿಕವಾಗಿದೆ ರಾಯರವರು ಈ ಪುಸ್ತಕವನ್ನು ತೆಗೆದುಕೊಂಡು ಪ್ರಸಿದ್ಧಿಸಿ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಲ್ಲಿ ಹಂಚಿದರು ವಿಶ್ವವಿದ್ಯಾಲಯದಲ್ಲಿ ಓದುತ್ತಿರುವ ವಿದ್ಯಾರ್ಥಿಗಳು ನಿಷ್ಪಕ್ಷಪಾತತನದಿಂದ ವಿಚಾರ ಮಾಡಬೇಕಾಗಿ ಕೇಳಿಕೊಂಡರು. ಭಾರತೀಯರಿಗೆ ಆಗುತ್ತಿರುವ ಅನ್ಯಾಯಗಳನ್ನು ಬ್ರಿಟಿಷರಿಗೆ ತಿಳಿಯಪಡಿಸಿದರೆ ಅವರು ಅನ್ಯಾಯವನ್ನು ದೂರ ಮಾಡಬಲ್ಲರೆಂದು ತಿಳಿಸಿದ್ದರು

ಎಡಿನ್‌ಬರೋ ವಿಶ್ವವಿದ್ಯಾಲಯದಿಂದ ಡಾಕ್ಟರ ಪದವಿಯನ್ನು ಪಡೆದರು. ಆ ಕಾಲದಲ್ಲಿ ಡಾಕ್ಟರ ಪದವಿಯನ್ನು ಸಂಪಾದಿಸುವದು ಬಹಳ ಕಠಿಣವಾಗಿತ್ತು. ಆ ವರ್ಷ ಡಾಕ್ಟರ ಪದವಿಯನ್ನು ಸಂಪಾದಿಸಿದರು

ಇವರೊಬ್ಬರೇ. ಎಡಿನ್‌ಬರೋದಲ್ಲಿ ಇನ್ನೊಂದು ವರ್ಷ ಹೆಚ್ಚಿಗೆ ನಿಂತು ತಮ್ಮ ಅಭ್ಯಾಸವನ್ನು ಮುಂದುವರಿಸಿದರು. ಹೊಸ ಶಿಷ್ಯವೃತ್ತಿಯನ್ನು ಸಂಪಾದಿಸಿದರು.

ಆಗ ಮೇಲಿನ ಹುದ್ದೆಗಳೆಲ್ಲವೂ ಯುರೋಪಿಯನ್ನರ ಸಲುವಾಗಿ ಮೀಸಲಾಗಿದ್ದವು ಇಂಡಿಯನ್ ಎಜ್ಯುಕೇಶನಲ್ ಸರ್ವಿಸದಲ್ಲಿ ಸೇರಲು ಪ್ರಯತ್ನಿಸಿದರು. ಆದರೆ ಸಾಧ್ಯವಾಗಲಿಲ್ಲ. ನಿರಾಶೆಯಿಂದ ಹಿಂದುಸ್ತಾನಕ್ಕೆ ಬಂದಾಗ ಇವರ ಹತ್ತಿರ ಒಂದು ದುಡ್ಡೂ ಇರಲಿಲ್ಲ.

ಇಂಗ್ಲೆಂಡದಿಂದ ತಿರುಗಿ ಬಂದ ಬಳಿಕ ಒಂದು ವರ್ಷದ ವರೆಗೆ ನೌಕರಿ ಇಲ್ಲದೆ ಹಾಗೆಯೇ ಕಳೆಯಬೇಕಾಯಿತು. ಈ ಹೊತ್ತಿನಲ್ಲಿ ಆಚಾರ್ಯರು ತಮ್ಮ ಅಭ್ಯಾಸವನ್ನು ನಡಿಸಿಯೇ ಇದ್ದರು ಸರ್ ಜಗದೀಶ ಚಂದ್ರ ಭೋಸರ ಹತ್ತಿರ ಆಶ್ರಯ ಪಡೆದಿದ್ದರು. ಸರ್ ಜಗದೀಶ ಚಂದ್ರರಂತಹ ಪ್ರಸಿದ್ಧ ವಿಜ್ಞಾನಿಗಳಿಗೂ ಮೇಲಿನ ಹುದ್ದೆಯು ದೊರೆಯಲಿಲ್ಲ. ಯುರೋಪಿಯನ್ನರಿಗೆ ದೊರೆಯುತ್ತಿದ್ದ ಸಂಬಳದ ೩ ಪಾಲು ಸಂಬಳದಿಂದಲೇ ತೃಪ್ತರಾಗಬೇಕಾಯಿತು.

ಡಾ. ರಾಯರನ್ನು ಅಸಿಸ್ಟಂಟ ಪ್ರೊಫೆಸರರನ್ನಾಗಿ ನಿಯಮಿಸಿಕೊಂಡರು. ಇಂಗ್ಲಂಡದಲ್ಲಿದ್ದಾಗ ಸ್ವತಂತ್ರ ರೀತಿಯಿಂದ ಜೀವನ ಸಾಗಿಸಿದ ರಾಯರವರಿಗೆ ಇಲ್ಲಿ ಅಪಮಾನವನ್ನು ಸಹಿಸಬೇಕಾಯಿತು. ಅಪಮಾನದ ವಿರುದ್ಧವಾಗಿ ದಾರ್ಜಿಲಿಂಗಕ್ಕೆ ವಿದ್ಯಾಧಿಕಾರಿಗಳ ಮುಂದೆ ದೂರು ಹೇಳಿದರು. ಆದರೆ ಆ ಯುರೋಪಿಯನ್ ಅಧಿಕಾರಿಯು ಇವರ ಮಾತಿನ ಕಡೆಗೆ ಗಮನ ಕೊಡಲಿಲ್ಲ.

ನೂರಾರು ತರುಣರು ಪದವಿಯನ್ನು ಸಂಪಾದಿಸಿ ಹೊರಬೀಳುತ್ತಿದ್ದರು. ಔದ್ಯೋಗಿಕ ದೃಷ್ಟಿಯಿಂದ ಭಾರತವು ಮುಂದುವರಿಯಬೇಕೆಂದು ಇವರ ಮನಸ್ಸಿನಲ್ಲಿತ್ತು. ಬಂಗಾಲದಲ್ಲಿ ರಾಸಾಯನಿಕ ಕಾರಖಾನೆಯನ್ನು ತೆಗೆದರು. ಪ್ರಫುಲ್ಲಚಂದ್ರ ರಾಯರವರು ಈ ಕಾರಖಾನೆಗೆ ತಮ್ಮ ಶ್ರೇಯಸ್ಸೆಲ್ಲವನ್ನೂ ಧಾರೆಯೆರೆದರು. ಇಂದು ರಾಸಾಯನಿಕ ಸಂಸ್ಥೆಯು ಭಾರತದ ಶ್ರೇಷ್ಠ ಸಂಸ್ಥೆಗಳಲ್ಲಿ ಒಂದಾಗಿರುವದು. ಮೊದಲು ಇದಕ್ಕೆ

೫೭೦ ರೂ. ಗಳನ್ನು ಖರ್ಚು ಮಾಡಿದರು. ಈಗ ಅದು ಲಕ್ಷಾಂತರ ರೂಪಾಯಿಗಳ ಬೆಲೆ ಬಾಳುವ ಸಂಸ್ಥೆಯಾಗಿದೆ.

ಡಾ. ರಾಯರವರು ಒಂದು ಹೊಸ ಶೋಧವನ್ನು ಮಾಡಿದರು. ಈ ಶೋಧದಿಂದ ಇವರ ಕೀರ್ತಿಯು ಎಲ್ಲ ಕಡೆಗೂ ಹಬ್ಬಿತು. ದೇಶವಿದೇಶ ಗಳಿಂದ ಇವರನ್ನು ಅಭಿನಂದಿಸುವ ಸಂದೇಶಗಳು ಬಂದವು. ಇಂಗ್ಲಿಷ ಪತ್ರಿಕೆಗಳು ಇವರ ಶೋಧವನ್ನು ಮೆಚ್ಚಿ ಅದರ ಮೇಲೆ ವಿಮರ್ಶೆ ಮಾಡಿ ದವು. ಇದರಿಂದ ಉತ್ತೇಜಿತರಾಗಿ ಡಾ. ರಾಯರವರು "ಹಿಂದೂ ರಸಾ ಯನ ಶಾಸ್ತ್ರದ ಇತಿಹಾಸ" ವೆಂಬ ಉಜ್ವಲ ಗ್ರಂಥವನ್ನು ಬರೆದರು. ಈ ಪುಸ್ತಕಕ್ಕಾಗಿ ಅವರು ಇಡೀ ದೇಶದ ತುಂಬ ತಿರುಗಾಡಿದರು. ಹಳೆಯ ಸಂಸ್ಕೃತ ಗ್ರಂಥಗಳನ್ನು ಸೂಕ್ಷ್ಮವಾಗಿ ಅಭ್ಯಾಸ ಮಾಡಿದರು ಪ್ರಾಚೀನ ಕಾಲದ ಭಾರತೀಯರು ರಸಾಯನ ಶಾಸ್ತ್ರದಲ್ಲಿ ಪ್ರಗತಿ ಹೊಂದಿದ್ದರೆಂಬು ದನ್ನು ಸಿದ್ಧಪಡಿಸಿದರು. ಭಾರತೀಯರಿಗೆ ತಮ್ಮ ಪೂರ್ವಜರ ಬಗ್ಗೆ ಒಂದು ಹೊಸ ಸಂಗತಿಯು ಗೊತ್ತಾಯಿತು. ಇದನ್ನು ಬೇರೆ ಭಾಷೆಗಳಲ್ಲಿ ಭಾಷಾಂತರಿಸಲು ಅನೇಕ ಪಾಶ್ಚಾತ್ಯ ವಿಜ್ಞಾನಿಗಳು ಇವರ ಅಪ್ಪಣೆ ಬೇಡಿದರು. ವಿಜ್ಞಾನಿಗಳಿಗೆ ಈ ಪುಸ್ತಕವು ಕುತೂಹಲವನ್ನುಂಟು ಮಾಡಿತು ಭಾರತದ ಬಗ್ಗೆ ಅವರಲ್ಲಿ ಗೌರವವು ಉತ್ಪನ್ನವಾಯಿತು.

ಪ್ರಫುಲ್ಲಚಂದ್ರ ರಾಯರವರು ಯುರೋಪದ ಪ್ರವಾಸವನ್ನು ಕೈಕೊಂಡರು. ಲಂಡನದಲ್ಲಿ ಎಲ್ಲ ಪ್ರಸಿದ್ಧ ವಿಜ್ಞಾನಿಗಳು ಇವರನ್ನು ಗೌರವಿಸಿದರು ತಮ್ಮ ಹಳೆಯ ಮಿತ್ರರನ್ನು ಎಡಿನ್‌ಬರೋದಲ್ಲಿ ಭೆಟ್ಟಿ ಯಾದರು. ಇವರ ಮಿತ್ರರೂ ಪ್ರಾಧ್ಯಾಪಕರೂ ಇವರನ್ನು ಗೌರವಿಸಿದರು ಫ್ರಾನ್ಸ, ಜರ್ಮನಿ ದೇಶಗಳಲ್ಲಿ ಸಂಚಾರ ಮಾಡಿ ತಿರುಗಿ ಹಿಂದುಸ್ಥಾನಕ್ಕೆ ಬಂದರು.

ಇಂಗ್ಲಂಡದಿಂದ ತಿರುಗಿ ಬಂದಬಳಿಕ ಡಾ. ರಾಯರವರು ಪ್ರೆಸಿಡೆನ್ಸಿ ಕಾಲೇಜನ್ನು ಬಿಡಬೇಕಾಯಿತು. ಸರ್ ತಾರಕಾನಾಥ ಪಾಲಿಬರ ಉದಾ ರತೆಯಿಂದ ಒಂದು ಹೊಸ ಕಾಲೇಜು ಸ್ಥಾಪಿತವಾಯಿತು. ಈ ಕಾಲೇಜ ನಲ್ಲಿ ರಸಾಯನ ಶಾಸ್ತ್ರದ ಮುಖ್ಯಾಧ್ಯಾಪಕರಾಗಿ ರಾಯರವರು ನೇಮಿಸ

ಲ್ಪಟ್ಟರು. “ ಭಾರತೀಯ ರಸಾಯನ ಶಾಸ್ತ್ರ ಸಂಘ ”ವನ್ನು ಸ್ಥಾಪಿಸಿದರು. ಉಳಿದ ದೇಶಗಳಲ್ಲಿ ಹೊಸ ಹೊಸ ಶೋಧಗಳು ಭರದಿಂದ ನಡೆದಿರುವವು. ನಮ್ಮ ದೇಶವು ವಿಜ್ಞಾನದಲ್ಲಿ ಹಿಂದುಳಿದಿರುವದು. ಉಳಿದ ದೇಶಗಳಂತೆ ನಮ್ಮ ದೇಶವೂ ವಿಜ್ಞಾನದಲ್ಲಿ ಮುಂದುವರಿಯಬೇಕೆಂದು ರಸಾಯನಶಾಸ್ತ್ರಸಂಘವು ತನ್ನ ಚಟುವಟಿಕೆಗಳನ್ನು ಪ್ರಾರಂಭ ಮಾಡಿತು.

೧೯೨೨ ರಲ್ಲಿ ಬಂಗಾಲದಲ್ಲಿ ಭೀಕರವಾದ ಬರಗಾಲವು ತಲೆದೋರಿತು. ಡಾ. ರಾಯರವರು ಸಹಾಯ ಪಥಕವನ್ನು ನಿರ್ಮಾಣ ಮಾಡಿದರು. ಡಾ. ರಾಯರ ಬಿನ್ನಹವನ್ನು ಮನ್ನಿಸಿ ದೇಶದ ಮೂಲೆ ಮೂಲೆಗಳಿಂದ ಜನರು ಹಣವನ್ನು ಕಳಿಸಿದರು. ಸಹಾಯ ಪಥಕದವರು ಅಮೂಲ್ಯವಾದ ಕೆಲಸವನ್ನು ಮಾಡಿದರು ೧೯೨೨ ರಲ್ಲಿ ಮಹಾಪೂರ ಬಂದು ಬಹಳ ಹಾನಿಯಾಯಿತು. ಡಾ. ರಾಯರವರು ಈ ಪ್ರಸಂಗದಲ್ಲಿಯೂ ಜನರಿಗೆ ಸಹಾಯ ನೀಡಿದರು. ಪ್ರಫುಲ್ಲಚಂದ್ರರ ಹೆಸರು ಬಂಗಾಲದಲ್ಲಿ ಮನೆ ಮಾತಾಯಿತು ಇವರ ಸಂಘಟನಾ ಚಾತುರ್ಯವು ದೇಶಕ್ಕೆಲ್ಲ ಗೊತ್ತಾಯಿತು ಇವರ ಕಾರ್ಯವನ್ನು ಬ್ರಿಟಿಶ ಪತ್ರಿಕೆಗಳು ಮುಕ್ತ ಕಂಠದಿಂದ ಹೊಗಳಿದವು. ಸರಕಾರವು ತನ್ನ ಕಾರ್ಯವನ್ನು ಮರೆತು ಇಲ್ಲದ ನೆವವನ್ನು ಹೇಳುತ್ತಿತ್ತು. ಸರ್ ರಾಯರವರು ಮುಂದೆ ಬಾರದಿದ್ದರೆ ಸಾವಿರಾರು ಜನರು ಜೀವದಿಂದ ಉಳಿಯುತ್ತಿರಲಿಲ್ಲ. ಈ ಕಾರ್ಯವನ್ನು ಮಾಡುವದು ಉಳಿದವರಿಗೆ ಸಾಧ್ಯವೂ ಇರಲಿಲ್ಲ. ಸರ್ ಪ್ರಫುಲ್ಲ ಚಂದ್ರ ರಾಯರವರಲ್ಲಿ ಜನರ ವಿಶ್ವಾಸವಿದ್ದುದರಿಂದಲೇ ಅವರು ಕೇಳಿದ ಕೂಡಲೇ ಜನರು ಧನ ಸಹಾಯ ಮಾಡಿದರು.

ಡಾ ರಾಯರವರು ವಿಜ್ಞಾನ ಪ್ರೇಮಿಗಳಿರುವಂತೆ ದೇಶ ಭಕ್ತರೂ ಇರುವರು. ಅವರು ಯಾವಾಗಲೂ ಖಾದೀ ಬಟ್ಟೆಗಳನ್ನು ತೊಟ್ಟುಕೊಳ್ಳುವರು. ಅದರ ಪ್ರಚಾರದಲ್ಲಿಯೇ ತೊಡಗಿರುವರು ಬಡ ಜನರ ದುಃಖವನ್ನು ಕಂಡು ಅವರು ಬಹಳ ಮರುಗುವರು ತಿಂಗಳಿಗೆ ೫೦ ರೂಪಾಯಿಗಳಗಿಂತ ಹೆಚ್ಚಿಗೆ ಪಗಾರ ತೆಗೆದುಕೊಳ್ಳುವದಿಲ್ಲ ನಮ್ಮ ವಿದ್ಯಾರ್ಥಿಗಳು ವಿಲಾಸದಿಂದ ಕಾಲ ಕಳೆಯುವದನ್ನು ಕಂಡು ಅವರ ಮನಸ್ಸಿಗೆ ಬಹಳ

ವ್ಯಥೆಯಾಗಿದೆ. ಅವರು ಮೊದಲಿನಿಂದಲೂ ತೀರ ಸಾದಾ ಜೀವನವನ್ನು ನಡಿಸಿರುವರು

ವಿನಯವು ಇವರ ಮುಖ್ಯ ಗುಣಗಳಲ್ಲಿ ಒಂದಾಗಿರುವದು. ಇವರು ತಮ್ಮ ಆತ್ಮ ಚರಿತ್ರೆಯನ್ನು ಬರೆದಿರುವರು. ಆ ಪುಸ್ತಕದಲ್ಲಿ ಇವರು ತಮ್ಮ ಪದವಿಗಳ ವಿಷಯವಾಗಿ ಒಂದು ಮಾತನ್ನೂ ಹೇಳಿಲ್ಲ! ಪರ ದೇಶದ ವಿಶ್ವ ವಿದ್ಯಾಲಯಗಳು ಗೌರವದ ಪದವಿಯನ್ನು ಕೊಟ್ಟು ಇವ ರನ್ನು ಗೌರವಿಸಿರುವವು ಇದಲ್ಲದೆ ಸರಕಾರವು ಸರ್ ಪದವಿಯನ್ನು ಕೊಟ್ಟಿರುವದು. ಪದವಿಗಳ ವಿಷಯವಾಗಿ ಮೋಹವಿಲ್ಲ. ಕಲಕತ್ತಾ ವಿಶ್ವ ವಿದ್ಯಾಲಯವು ಇವರನ್ನು ಇವರ ಕೆಲಸಕ್ಕಾಗಿ ಸತ್ಕಾರ ಮಾಡಿತು. ಆಗ ಭಾಷಣ ಮಾಡುತ್ತ 'ನಾನೊಬ್ಬ ಸಾಮಾನ್ಯ ಮನುಷ್ಯ' ನೆಂದು ಇವರು ನುಡಿದರು. ನಿಜವಾಗಿ ಇವರು ಆಚಾರ್ಯ ಪದಕ್ಕೆ ಅರ್ಹರಾದವರು. ಹಿಂದಿನ ಕಾಲದಲ್ಲಿ ವಿದ್ವಾಂಸರಾದ ಗುರುಗಳಿಗೆ ಆಚಾರ್ಯರೆನ್ನುತ್ತಿದ್ದರು ಹಿಂದಿನ ಕಾಲದ ಋಷಿಗಳಂತೆ ಜೀವನ ನಡಿಸುತ್ತಿರುವ ಪ್ರಫುಲಚಂದ್ರರು ಆಧುನಿಕ ಯುಗದ ಆಚಾರ್ಯರೇ ಸರಿ.

## ಸರ್ ವಿಶ್ವೇಶ್ವರಯ್ಯನವರು

ಭಾರತವು ಸ್ವತಂತ್ರವಾಗಿದೆ. ನಮ್ಮ ದೇಶದ ಔದ್ಯೋಗಿಕ ಉನ್ನತಿ ಯನ್ನು ಮಾಡಿಕೊಳ್ಳುವದಕ್ಕೆ ಹೆಚ್ಚು ಅವಕಾಶವಿದೆ. ಮೊದಲು ಯಾವ ಉದ್ಯೋಗಕ್ಕೂ ಬ್ರಿಟಿಷರು ತೊಂದರೆಯನ್ನು ಮುಂದೆ ಒಡ್ಡುತ್ತಿದ್ದರು ಯಾವ ಉದ್ಯೋಗವೂ ಮುಂದುವರಿಯಲು ಸಾಧ್ಯವಿರಲಿಲ್ಲ. ಭಾರತವು ಒಂದಾನೊಂದು ಕಾಲದಲ್ಲಿ ವೈಭವದ ನಾಡಾಗಿತ್ತು. ಅದು ಅತ್ಯಂತ ಶ್ರೇಷ್ಠವಾದ ರೇಶಿಮೆಯ ಬಟ್ಟೆಯನ್ನು ಪರದೇಶಕ್ಕೆ ಕಳಿಸುತ್ತಿತ್ತು. ಆ ಕಲಾಕೌಶಲ್ಯವು ನಮ್ಮಲ್ಲಿ ಈಗ ಇಲ್ಲದಾಗಿದೆ. ಎಲ್ಲ ದೇಶಗಳಲ್ಲಿಯೂ ಔದ್ಯೋಗಿಕ ಕ್ರಾಂತಿಯಾಗಿದೆ. ನಮ್ಮ ದೇಶದ ಆರ್ಥಿಕ ಪರಿಸ್ಥಿತಿಯು ಸುಧಾರಿಸಬೇಕಾದರೆ ನಮ್ಮಲ್ಲಿ ಕಾರಖಾನೆಗಳು ಬೆಳೆಯಬೇಕು. ಎಲ್ಲ ತರದ ಕಚ್ಚಾ ಮಾಲು ನಮ್ಮಲ್ಲಿ ದೊರೆಯುವದು. ನಾವು ಅದರ ಉಪ

ಯೋಗ ಮಾಡಿಕೊಂಡು ನಮ್ಮ ದೇಶದ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಬೇಕು ಕೇವಲ ಸ್ವಾತಂತ್ರ್ಯವೊಂದೇ ಎಲ್ಲ ರೋಗಗಳಿಗೂ ರಾಮಬಾಣ ಔಷಧಿಯಾಗಲಾರದು. ಪ್ರತಿಯೊಂದು ದೋಷಕ್ಕೂ ನಾವು ಬ್ರಿಟಿಶರನ್ನು ದೂರುತ್ತಿದ್ದೆವು. ಈಗ ನಮ್ಮ ದೋಷವನ್ನರಿತುಕೊಂಡು ಮುಂದೆ ನಡೆಯಬೇಕಾಗಿದೆ ಮೈಸೂರ ಸಂಸ್ಥಾನವು ಎಲ್ಲ ಸಂಸ್ಥಾನಗಳಿಗಿಂತಲೂ ಕೈಗಾರಿಕೆ, ಔದ್ಯೋಗಿಕ ಉದ್ಯೋಗದಲ್ಲಿ ಮುಂದುವರಿಯುವದಕ್ಕೆ ಬಹಳವಾಗಿ ವಿಶ್ವೇಶ್ವರಯ್ಯನವರು ಕಾರಣರಾಗಿರುವರು ಭಾರತವು ವ್ಯಾಪಾರದಲ್ಲಿ ಮುಂದುವರಿದು ಸಂಪತ್ತಿನ ಆಗರವಾಗಬೇಕಾದರೆ ವಿಶ್ವೇಶ್ವರಯ್ಯನವರಂಥ ಶಿಲ್ಪಿಗಳ ಅವಶ್ಯಕತೆಯಿದೆ

ವಿಶ್ವೇಶ್ವರಯ್ಯನವರು ೧೮೬೧ ರಲ್ಲಿ ಕೋಲಾರ ಜಿಲ್ಲೆಯಲ್ಲಿಯ ಚಿಕ್ಕಬಳ್ಳಾಪುರದಲ್ಲಿ ಜನಿಸಿದರು ೧೮೮೧ ರಲ್ಲಿ ಬೆಂಗಳೂರಿನಲ್ಲಿರುವ ಸೆಂಟ್ರಲ್ ಕಾಲೇಜಿನಲ್ಲಿ ವಿದ್ಯಾಭ್ಯಾಸ ಮಾಡಿ ಬಿ. ಎ. ಪದವಿಯನ್ನು ಸಂಪಾದಿಸಿದರು. ಮೈಸೂರ ಸರಕಾರದ ಶಿಷ್ಯವೃತ್ತಿಯನ್ನು ಪಡೆದು ಇಂಜನಿಯರ ಪರೀಕ್ಷೆಯಲ್ಲಿ ಪಾಸಾಗಿ ಪುಣೆ, ಖಾನದೇಶಗಳಲ್ಲಿ ಆಸಿಸ್ಟಂಟ ಇಂಜನಿಯರರಾಗಿ ಕೆಲಸ ಮಾಡಿದರು ಹೈದ್ರಾಬಾದ ಸಂಸ್ಥಾನದಲ್ಲಿಯೂ ಕೆಲಸ ಮಾಡಿದರು. ಇವರ ಕೆಲಸವು ಬಹಳ ಮೆಚ್ಚಿಗೆಗೆ ಪಾತ್ರವಾಗಿತ್ತು. ಹಿಂದೀಯರಿಗೆ ಆಗಿನ ಕಾಲದಲ್ಲಿ ದೊರೆಯತಕ್ಕ ಅತಿ ಮೇಲಿನ ಸ್ಥಾನವು ಇವರಿಗೆ ದೊರೆಯಿತು ಇವರು ೧೯೦೮ ರಲ್ಲಿ ನಿವೃತ್ತರಾದರು.

ಇವರು ನೌಕರಿಯಲ್ಲಿ ಇರುವಾಗ ಚೀನ, ಜಪಾನ ದೇಶಗಳಿಗೆ ಭೆಟ್ಟಿ ಕೊಟ್ಟರು. ಚೀನ ದೇಶದಲ್ಲಿ ಇವರ ಹೆಸರು ಮೊದಲೇ ಪ್ರಸಿದ್ಧವಾಗಿತ್ತು. ಚೀನ ದೇಶದ ಸರಕಾರವು ಇವರಿಗೊಂದು ಮೇಲಿನ ಹುದ್ದೆಯನ್ನು ಕೊಟ್ಟಿತು. ಆದರೆ ವಿಶ್ವೇಶ್ವರಯ್ಯನವರು ಚೀನದಲ್ಲಿ ಕೆಲಸ ಮಾಡಲು ಒಪ್ಪಲಿಲ್ಲ. ಭರತಖಂಡದ ಉದ್ಧಾರ ಮಾಡುವದೇ ಅವರ ಉದ್ದೇಶವಾಗಿತ್ತು. ೧೯೦೬ ರಲ್ಲಿ ದೇಶದಲ್ಲಿ ಜಾಗೃತಿಯುಂಟಾಯಿತು, ಈ ಕಾಲದಲ್ಲಿ ವಿಶ್ವೇಶ್ವರಯ್ಯನವರಿಗೆ ರಾನಡೆ ಮತ್ತು ಗೋಖಲೆಯವರ ಪರಿಚಯವುಂಟಾಯಿತು ಇದರಿಂದ ಬಡ ಭಾರತೀಯರ ಜೀವನ ಮೌಲ್ಯವನ್ನು ಹೆಚ್ಚಿಸಬೇಕೆಂದು ಯೋಚಿಸತೊಡಗಿದರು.

ಮುಂಬಯಿ ಪ್ರಾಂತದಲ್ಲಿ ಕೆಲಸ ಮಾಡಿ ನಿವೃತ್ತರಾದ ಮೇಲೆ ಮೈಸೂರ ಸಂಸ್ಥಾನದಲ್ಲಿ ಮುಖ್ಯ ಇಂಜನಿಯರರಾಗಿ ಕೆಲಸ ಮಾಡಿದರು. ಮಹಾರಾಜರಿಗೆ ಸರ್ ವಿಶ್ವೇಶ್ವರಯ್ಯನವರ ಯೋಗ್ಯತೆಯು ಗೊತ್ತಾಯಿತು ಮಹಾರಾಜರು ಅವರನ್ನು ದಿವಾಣರನ್ನಾಗಿ ಮಾಡಿದರು. ಮೈಸೂರಿಗೆ ಭಾಗ್ಯೋದಯವು ಬಂದಂತಾಯಿತು ಎಲ್ಲ ಕೈಗಾರಿಕೆಗಳಲ್ಲಿಯೂ ಮುಂದುವರಿಯುವಂತಾಯಿತು. ವಿಶ್ವೇಶ್ವರಯ್ಯನವರಿಂದ ಮೈಸೂರಿಗೆ ಕೀರ್ತಿ ಬರುವಂತಾಯಿತು.

ಮೈಸೂರು ವಿಶ್ವವಿದ್ಯಾನಿಲಯ, ಕನ್ನಂಬಾಡಿಯ ಆಣೆಕಟ್ಟು, ಭದ್ರಾವತಿಯಲ್ಲಿಯ ಕಬ್ಬಿಣದ ಕಾರಖಾನೆ ಇವೆಲ್ಲವೂ ವಿಶ್ವೇಶ್ವರಯ್ಯನವರ ಪ್ರಯತ್ನದಿಂದಲೇ ಆರಂಭವಾದವು. ಮೈಸೂರ ಸಂಸ್ಥಾನದಲ್ಲಿ ಎಲ್ಲ ಕಡೆಗೂ ವಿದ್ಯುತ್ ದೀಪ ಮತ್ತು ನೀರಿನ ಪೂರೈಕೆಯಾಗುವಂತೆ ಮಾಡಿದರು. ಅಧಿಕಾರಿಗಳು ಕಾರ್ಯಕುಶಲರಾಗುವಂತೆ ಪ್ರಯತ್ನಿಸಿದರು. ಸಾದಾ ಪೋಷಾಕಿನಲ್ಲಿ ಯಾರಿಗೂ ಗೊತ್ತಾಗದಂತೆ ಅಧಿಕಾರಿಗಳಿಗೆ ಭೆಟ್ಟಿ ಕೊಟ್ಟು, ಅವರ ಕೆಲಸವನ್ನು ನಿರೀಕ್ಷಿಸುತ್ತಿದ್ದರು. ಹಳ್ಳಿಗರ ಉತ್ಸಾಹದಿಂದ ತಮ್ಮ ಕೆಲಸವನ್ನು ಸುಧಾರಿಸಿಕೊಂಡರು. ಎಲ್ಲ ಕಡೆಗೂ ಒಂದು ಸುವ್ಯವಸ್ಥಿತವಾದ ಆಡಳಿತೆಯು ಕಂಡುಬರುತ್ತಿತ್ತು ಗಂಧದ ವಸ್ತ್ರ ಸಾಬಾಣದ ಕಾರಖಾನೆಗಳು ನಿರ್ಮಿತವಾದವು.

ಸರ್ ವಿಶ್ವೇಶ್ವರಯ್ಯನವರು ದಿವಾಣರಾದಾಗ ಮೈಸೂರಲ್ಲಿ ಜಾತೀಯತೆಯು ಬಹಳವಾಗಿತ್ತು. ಹರಿಜನರಿಗೆ ಸಾರ್ವಜನಿಕ ಬಾವಿಯಲ್ಲಿ ನೀರು ಒಯ್ಯಲು ಅಸ್ಪದವಿರಲಿಲ್ಲ. ವಿಶ್ವೇಶ್ವರಯ್ಯನವರು ಈ ರೀತಿ ಜಾತಿ ಜಾತಿಗಳಲ್ಲಿ ಭೇದವೆಣಿಸುವದು ಎಂದೂ ಹಿತವಾಗಲಾರದೆಂದು ಹೇಳಿದರು. ಎಲ್ಲ ಜಾತಿಯವರೂ ಸಹಾನುಭೂತಿಯಿಂದ ನಡೆದುಕೊಳ್ಳಬೇಕೆಂದು ತಿಳಿಸಿದರು. ಹರಿಜನರ ಉದ್ಧಾರದ ಸಲುವಾಗಿ ಸಮಿತಿಯನ್ನು ನಿಯಮಿಸಿದರು. ಯೋಗ್ಯರಾದದರಿಗೆ ಅವರ ಜಾತಿಯನ್ನೆಣಿಸದೆ ದೊಡ್ಡ ಹುದ್ದೆಗಳನ್ನು ಕೊಟ್ಟರು. ನಿಜವಾಗಿ ಕುಶಲರಾದವರು ಕಡಿಮೆಯಿರುವದರಿಂದ ಜಾತಿ ಬೇಧವು ಹಾನಿಕರವಾದುದೆಂದು ಹೇಳಿದರು ನಮ್ಮ ಯೋಗ್ಯತೆಯು ಜ್ಞಾನವೇ ನಮಗೆ ಇಲ್ಲದಂತಾಗಿದೆ. ನಮಗೆ ಆತ್ಮವಿಶ್ವಾಸವಿಲ್ಲ. ಪ್ರತಿ

ಯೊಬ್ಬನು ಆತ್ಮವಿಶ್ವಾಸದಿಂದ ಕೆಲಸ ಮಾಡಬೇಕೆಂದು ಹೇಳಿದರು ಯೋಗ್ಯರಾದವರನ್ನು ಪರದೇಶಗಳಿಗೆ ಕಳಿಸಿ ತರಬೇತಿಯಾಗುವಂತೆ ಮಾಡಿದರು ಅವರಿಗೆ ಬೇಕಾಗಿದ್ದುದು ಕುಶಲರೂ, ದಕ್ಷರೂ ಆದ ಕೆಲಸಗಾರರು ದಸರೆಯ ದರಬಾರದಲ್ಲಿ ಯುರೋಪಿಯನ್ನರಿಗೆ ಬೇರೆ ಆಸನಗಳು ಹಿಂದೀಯರಿಗೆ ಬೇರೆ ಆಸನಗಳು ಇರುತ್ತಿದ್ದವು. ಈ ಭೇದವನ್ನು ನಿಲ್ಲಿಸಿದರು.

ಬೆಂಗಳೂರಿನಲ್ಲಿ ಹಿಂದೂ ಮುಸಲ್ಮಾನರ ದಂಗೆಯು ಪ್ರಾರಂಭವಾಯಿತು. ಇದು ಇಡೀ ದೇಶಕ್ಕೆ ಹಾನಿಕರವೆಂದು ವಿಶ್ವೇಶ್ವರಯ್ಯನವರು ನುಡಿದರು ಇದರ ವಿಚಾರವನ್ನು ಮಾಡುವದಕ್ಕಾಗಿ ಒಂದು ಸಮಿತಿಯು ನಿರ್ಮಾಣವಾಯಿತು. ಈ ವಿಚಾರಣಾ ಸಮಿತಿಗೆ ವಿಶ್ವೇಶ್ವರಯ್ಯನವರು ಅಧ್ಯಕ್ಷರಾಗಿದ್ದರು ಆ ಕಾಲದಲ್ಲಿ ಇವರು ನಿಃಪಕ್ಷಪಾತತನದಿಂದ ಮಾಡಿದ ಕೆಲಸವು ಬಹಳ ಲೋಕಪ್ರಿಯವಾಯಿತು.

ಭಾರತ ದೇಶದಲ್ಲಿ ನೂರಾರು ಜನರು ಹೊಟ್ಟೆಗಿಲ್ಲದೆ ಒಳಲುತ್ತಿರುವರು ಮೈಮೇಲೆ ಹೊದೆಯಲು ಬಟ್ಟೆಗಳೂ ಇಲ್ಲ ಬಡ ಜನರ ಉದ್ಧಾರವಾಗಬೇಕಾದರೆ ಹಳ್ಳಿಗಳ ಉದ್ಧಾರವಾಗಬೇಕು ಹಳ್ಳಿಗಳೇ ಹಿಂದುಸ್ಥಾನದ ಜೀವಾಳ. ಆದ್ದರಿಂದ ಖಾದಿಯ ಉತ್ಪಾದನೆಯು ಜೋರಿನಿಂದ ಸಾಗಬೇಕು ಪ್ರತಿಯೊಬ್ಬನೂ ತನಗೆ ಬೇಕಾಗುವಷ್ಟು ಬಟ್ಟೆಯನ್ನು ವರ್ಷದಲ್ಲಿ ಉತ್ಪಾದಿಸಬೇಕು. ಇದರಿಂದ ಹಳ್ಳಿಯ ಪರಿಸ್ಥಿತಿಯು ಸುಧಾರಿಸುವದೆಂದು ಮಹಾತ್ಮಾಜಿಯವರು ಹೇಳಿದರು. ಖಾದಿಯ ಉತ್ಪಾದನೆಗೆ ಅವರು ಮಹತ್ವಕೊಟ್ಟರು. ವಿಶ್ವೇಶ್ವರಯ್ಯನವರ ದೃಷ್ಟಿಕೋನವು ಬೇರೆಯಾದದ್ದು ಇದರಿಂದ ಪರಿಸ್ಥಿತಿಯು ಒಳ್ಳೆಯದಾಗಲಾರದೆಂದು ಅವರ ಅಭಿಪ್ರಾಯವಾಗಿತ್ತು. ಅವರಿಗೆ ಪಾಶ್ಚಿಮಾತ್ಯ ರೀತಿಯಂತೆ ದೇಶವನ್ನು ಔದ್ಯೋಗಿಕ ರಾಷ್ಟ್ರವನ್ನಾಗಿ ಮಾಡಬೇಕಾಗಿತ್ತು. ಆದರೂ ದೇಶದ ಸಾಂಪತ್ತಿಕ ಸ್ಥಿತಿಯನ್ನು ಸುಧಾರಿಸಲಿಕ್ಕೆ ಬೇರೆ ಮಾರ್ಗವಿಲ್ಲವೆಂದು ಖಾದೀ ಉತ್ಪಾದನೆಗೆ ಬೆಂಬಲಕೊಟ್ಟರು. ಪ್ರತಿಯೊಂದು ಮನೆಗೂ ರೇಡಿಯೊ, ಮೋಟಾರ ಬೇಕು ಎಂದು ಪ್ರತಿಪಾದಿಸುವ ವಿಶ್ವೇಶ್ವರಯ್ಯನವರಿಗೆ ಈ ಉರುಟು ಬಟ್ಟೆ ನೇಯುವ ಉದ್ಯೋಗವು ಸರಿ ಬಂದಿರ

ಲಿಕ್ಕಿಲ್ಲ. ಉಳಿದ ದೇಶಗಳಂತೆ ನಮ್ಮ ದೇಶದ ಆರ್ಥಿಕ ಪರಿಸ್ಥಿತಿಯು ಬೇಗನೆ ಬದಲಾವಣೆ ಹೊಂದಬೇಕೆಂದು ಅವರ ಇಚ್ಛೆಯಾಗಿತ್ತು. ಇದು ಯಂತ್ರಗಳಿಂದಲೇ ಸಾಧ್ಯವೆಂದು ಅವರು ನಂಬಿದ್ದರು.

ಒಳ್ಳೇಯ ನಾಗರಿಕನಾಗಬೇಕಾದರೆ ಉದ್ಯೋಗಶೀಲತೆ ಸಹಕಾರ ಭಾವ, ಸ್ವಾವಲಂಬಿಯಾಗಿರುವದು ಮುಖ್ಯವಾದವುಗಳೆಂದು ವಿಶ್ವೇಶ್ವರಯ್ಯನವರು ನಂಬಿರುವರು. ದಿನಾಲು ಅವರು ೮ ತಾಸು ಕೆಲಸಮಾಡುವರು ೮ ತಾಸು ನಿದ್ದೆ ೮ ತಾಸು ಆಹಾರಸೇವನ ವಿಶ್ರಾಂತಿ ಮುಂತಾದ ಕಾರ್ಯಗಳಿಗೆ ಮುಪ್ಪಿನ ವಯಸ್ಸಿನಲ್ಲಿಯೂ ಪರದೇಶಗಳಲ್ಲಿ ಸಂಚಾರ ಮಾಡಿ ಜ್ಞಾನವನ್ನು ಸಂಪಾದಿಸಿದರು. ಇಂಗ್ಲಂಡ, ಅಮೇರಿಕೆಗಳಂತೆ ನಮ್ಮ ದೇಶವು ಶ್ರೀಮಂತ ರಾಷ್ಟ್ರವಾಗಬೇಕೆಂದು ಅವರ ಇಚ್ಛೆಯಿರುವದು. ಭಾರತದ ಕಲ್ಯಾಣಕ್ಕಾಗಿ ಈಗಲೂ ಸಲಹೆ ಸೂಚನೆಗಳಿಂದ ಸಹಾಯ ಮಾಡುತ್ತಿರುವರು. ಇವರ ಪ್ರಯತ್ನದಿಂದ ಭಾರತವು ಬೇಗನೆ ಸಂಪತ್ತಿನಿಂದ ಕೂಡಿದ ರಾಷ್ಟ್ರವಾಗಲಿ.

## ಶ್ರೀ ರಮಣ ಮಹರ್ಷಿಗಳು

ನಮ್ಮ ದೇಶವು ಋಷಿಗಳ ಬೀಡು. ಪ್ರಾಚೀನ ಕಾಲದಲ್ಲಿ ಅನೇಕ ಋಷಿಗಳು ಅರಣ್ಯದಲ್ಲಿ ತಪಸ್ಸುಮಾಡುತ್ತ ಕಾಲವನ್ನು ಕಳೆಯುತ್ತಿದ್ದರು. ರಾಜರಾದವರು ಉತ್ತರ ವಯಸ್ಸಿನಲ್ಲಿ ತಪಸ್ಸಿಗಾಗಿ ಅರಣ್ಯಕ್ಕೆ ಹೋಗುತ್ತಿದ್ದರು. ಆಧ್ಯಾತ್ಮ ವಿದ್ಯೆಯು ಎಲ್ಲ ವಿದ್ಯೆಗಳಲ್ಲಿಯೂ ಶ್ರೇಷ್ಠವಾದದ್ದೆಂದು ಉಪನಿಷತ್ತುಗಳು ಹೇಳುತ್ತವೆ. ಮೋಕ್ಷವೇ ಜೀವನದ ಶ್ರೇಷ್ಠತಮ ಉದ್ದೇಶವೆಂದು ನಮ್ಮ ಧರ್ಮವು ಬೋಧಿಸುವದು. ರಮಣ ಮಹರ್ಷಿಗಳು ಪ್ರಾಚೀನ ಕಾಲದ ಋಷಿಗಳಂತೆ ಆಶ್ರಮವನ್ನು ಕಟ್ಟಿಕೊಂಡು ಅಲ್ಲಿಯೇ ವಾಸಿಸುತ್ತಿದ್ದರು.

ಚಿಕ್ಕಂದಿನಿಂದಲೂ ಅವರಿಗೆ ಅಧ್ಯಾತ್ಮದ ಕಡೆಗೆ ಒಲವಿತ್ತು. ಇವರ ಅಣ್ಣಂದಿರು ಇವರನ್ನು ಸಾಲೆಗೆ ಯಾಕೆ ಹೋಗುವದಿಲ್ಲ ಎಂದು ಕೇಳಲು

ಶಾಲೆಯು ತಪಸ್ಸಿಗೆ ಯೋಗ್ಯವಾದ ಸ್ಥಳವಲ್ಲವೆಂದು ಹೇಳಿದರು. ಅರು ಣಾಚಲಮ್ ಎಂಬ ಹೆಸರನ್ನು ಕೇಳಿದೊಡನೆ ಅವರಿಗೆ ಅಲ್ಲಿಗೆ ಹೋಗ ಬೇಕೆಂಬ ಇಚ್ಛೆಯಾಯಿತು. ಮನೆಯಲ್ಲಿ ಒಂದು ಪತ್ರವನ್ನು ಬರೆದಿಟ್ಟು ಅರುಣಾಚಲಮ್‌ದ ಕಡೆಗೆ ನಡೆದರು. ಗಾಡಿಗೆ ಕೊಡಬೇಕಾದ ಹಣವೂ ಅವರ ಹತ್ತಿರ ಇರಲಿಲ್ಲ. ಕಿವಿಯಲ್ಲಿಯ ವಸ್ತುವನ್ನು ಮಾರಿ ಗಾಡಿಯ ಲೆಕ್ಕಕೊಟ್ಟರು. ಮನೆಯಿಂದ ಹೊರಡುವಾಗ ತಮ್ಮನ್ನು ಹುಡುಕುವ ಕಾರಣ ವಿಲ್ಲೆಂತಲೂ ತಾವು ದೇವರನ್ನು ಕಾಣುವದಕ್ಕಾಗಿ ಹೊರಟಿರುವ ರೆಂದೂ ಬರೆದಿದ್ದರು. ಅರುಣಾಚಲಮ್‌ಕ್ಕೆ ಹೋಗುವ ಹಾದಿಯು ರಮಣ ಮಹರ್ಷಿಗಳಿಗೆ ಗೊತ್ತಿರಲಿಲ್ಲ ಗಾಡಿಯು ಬರುವದಕ್ಕೆ ತಡವಾಯಿತು. ಆಗ ಗಡ್ಡ ಬಿಟ್ಟಂಥ ಒಬ್ಬವನು ಅವರಿಗೆ ಭೆಟ್ಟಿಯಾದನು. 'ನಿಮಗೆ ಎಲ್ಲಿಗೆ ಹೋಗಬೇಕಾಗಿದೆ?' ಎಂದು ಅವನು ಕೇಳಿದನು. ತಾನೂ ಅಲ್ಲಿಗೆ ಹೋಗಬೇಕಾಗಿದೆಯೆಂದು ಹೇಳಿ ಎಲ್ಲಾಪುರದ ಹತ್ತಿರ ಇಳಿಯಬೇಕಾಗು ವದೆಂದು ಹೇಳಿದನು ಮುಂದಿನ ರೇಲ್ವೆ ನಿಲ್ದಾಣದಲ್ಲಿ ಅವನು ರಮಣ ಮಹರ್ಷಿಗಳಿಗೆ ಕಾಣಲೇ ಇಲ್ಲ. ರಮಣಮಹರ್ಷಿಗಳು ಇದು ಆಶ್ಚರ್ಯ ಕಾರ ಘಟನೆಯೆಂದು ಹೇಳಿರುವರು. ೧೮೯೬ರಲ್ಲಿ ತಿರುವನ ಮಲಾಯಿಗೆ ಬಂದವರು ಅವರು ದೇಹವಿಡುವವರೆಗೆ ಅಲ್ಲಿಯೇ ಇದ್ದರು.

ಒಮ್ಮೆ ರಮಣ ಮಹರ್ಷಿಗಳು ಅರಯನಿ ಗುಡಿಯಲ್ಲಿ ಕುಳಿತು ಕೊಂಡಿದ್ದರು. ಅವರಿಗೆ ಎಲ್ಲ ಕಡೆಗೂ ಪ್ರಕಾಶವೇ ಕಂಡಿತು. ಯಾರಾ ದರೂ ದೊಡ್ಡ ದೀಪವನ್ನು ಹಚ್ಚಿರ ಬಹುದೆಂದು ತಿಳಿದರು. ಆದರೆ ಅಲ್ಲಿ ಯಾವ ದೀಪವೂ ಇರಲಿಲ್ಲ ಈ ಗುಡಿಯು ಜ್ಞಾನ ಸಂಬಂದರ ಋಷಿ ಗಳಿಂದ ಸ್ಥಾಪಿತವಾದದ್ದೆಂದು ಹಿಂದುಗಡೆಯಿಂದ ರಮಣ ಮಹರ್ಷಿ ಗಳಿಗೆ ಗೊತ್ತಾಯಿತು. ಜನರು ರಮಣ ಮಹರ್ಷಿಗಳು ಜ್ಞಾನ ಸಂಬಂದರ ಅವತಾರವೆಂದು ತಿಳಿಯುವರು. ಜ್ಞಾನ ಸಂಬಂದರು ಸುಮಾರು ಹದಿನಾರನೆಯ ವಯಸ್ಸಿನಲ್ಲಿ ಕಾಲವಾದರು. ಅಷ್ಟು ಚಿಕ್ಕ ವಯಸ್ಸಿನಲ್ಲಿಯೂ ಅವರಿಗೆ ಜ್ಞಾನವಾಯಿತು!

ತಪಸ್ಸಿಗೆ ಕುಳಿತಾಗ ಅನೇಕ ತೊಂದರೆಗಳುಂಟಾದವು. ಹುಡು ಗರು ಕಲ್ಲು ತೆಗೆದುಕೊಂಡು ಒಗೆಯತೊಡಗಿದರು. ರಮಣ ಮಹರ್ಷಿಗಳು

ಆ ಸ್ಥಳವನ್ನು ಬಿಟ್ಟು ಮತ್ತೊಂದು ಸ್ಥಳಕ್ಕೆ ಹೋದರು ಅಲ್ಲಿ ಹುಳ ಗಳಿಂದ ತೊಂದರೆಯಾಗತೊಡಗಿತು. ಅವರ ಕಾಲುಗಳಿಂದ ರಕ್ತ, ಕೀವು ಗಳು ಸೋರುತ್ತಿದ್ದವು. ರಮಣ ಮಹರ್ಷಿಗಳಿಗೆ ಇದರ ಎಚ್ಚರವಿರುವ ದಿಲ್ಲ. ಅವರ ಮಿತ್ರರು ಅವರನ್ನು ಬೇರೆಕಡೆಗೆ ಸಾಗಿಸಿದರು. ಈ ಕಾಲ ದಲ್ಲಿ ಇವರ ಆಹಾರವು ಸಾಧುಗಳು ಕೊಡುತ್ತಿದ್ದ ಹಾಲು ಹಣ್ಣು ಇಷ್ಟೇ. ಅವು ದಿನಾಲು ಒಮ್ಮೆ ಮಾತ್ರ ಅಭಿಷೇಕವೆಂದು ಇವರಿಗೆ ದೊರೆಯುತ್ತಿ ದ್ದವು. ಮಹರ್ಷಿಗಳು ದಿನದಿಂದ ದಿನಕ್ಕೆ ಏಕಾಂತ ಸ್ಥಳಕ್ಕೆ ಸಾಗುತ್ತ ನಡೆದರು ಪ್ರಶಾಂತವಾದ ಸ್ಥಳದಲ್ಲಿ ಬಂದು ನೆಲಸಿದರು. ಅವರು ಏಕಾಂತ ಸ್ಥಳದಲ್ಲಿ ನೆರೆದರೂ ಇವರ ಶಿಷ್ಯವೃಂದವು ಬೆಳೆಯುತ್ತ ಹೋಯಿತು. ಇವರ ದರ್ಶನಕ್ಕಾಗಿ ಬರುವ ಜನರ ಸಂಖ್ಯೆಯು ಹೆಚ್ಚಾ ಯಿತು. ಇವರು ಅರಣ್ಯದಲ್ಲಿ ತಪಸ್ಸು ಮಾಡುತ್ತಿರುವದು ಇವರ ಸಂಬಂಧಿಕರಿಗೆ ತಿಳಿಯಿತು. ಅವರು ಇವರನ್ನು ತಿರುಗಿ ಕರೆಯಲು ಬಂದರು. ಆದರೆ ರಮಣ ಮಹರ್ಷಿಗಳು ಧೃಢವ್ರತರಾಗಿದ್ದರು. ಇವರ ತಾಯಿಯು ಬಂದು ಎಷ್ಟು ಬಿನ್ನಹ ಮಾಡಿಕೊಂಡರೂ ಇವರು ತಿರುಗಿ ಹೋಗಲಿಲ್ಲ. ಕೆಲವು ದಿವಸಗಳ ತರುವಾಯ ಇವರ ತಾಯಿಯವರು ಬಂದು ಆಶ್ರಮದಲ್ಲಿಯೇ ನಿಂತುಕೊಂಡರು.

ಮತ್ತೆ ತೊಂದರೆಗಳು ಉದ್ಭವಿಸಿದವು ದಿನಾಲು ನೂರಾರು ಜನರು ಆಶ್ರಮಕ್ಕೆ ಬರತೊಡಗಿದರು ಇದರಿಂದ ರಮಣ ಮಹರ್ಷಿಗಳ ಕೀರ್ತಿಯು ಎಲ್ಲ ಕಡೆಗೂ ಹಬ್ಬಿತು ತಿರುವನ ಮಲಾಯದಲ್ಲಿರುವ ಸಾಧುಗಳಿಗೆ ಇವರ ಮೇಲೆ ಅಸೂಯೆ ಉತ್ಪನ್ನವಾಯಿತು ರಮಣ ಮಹರ್ಷಿ ಗಳನ್ನು ಕೊಲ್ಲುವದಕ್ಕಾಗಿ ಅನೇಕ ಪ್ರಯತ್ನಗಳನ್ನುಮಾಡಿ ವಿಫಲ ರಾದರು. ನೂರಾರು ಜನರು ಆಶ್ರಮಕ್ಕೆ ಬರುತ್ತಿದ್ದುದರಿಂದ ಅವರೆಲ್ಲರೂ ಕಾಣಿಕೆಗಳನ್ನು ಕೊಡುವರೆಂದು ತಿಳಿದು ತುಡುಗರು ಇವರ ಆಶ್ರಮದ ಮೇಲೆ ದಾಳಿಮಾಡಿದರು. ಹಣವನ್ನು ಕೊಡಿರೆಂದು ರಮಣ ಮಹರ್ಷಿ ಗಳನ್ನು ಬಡಿದರು. ಇವರ ಶಿಷ್ಯರೂ ಏಟು ತಿನ್ನಬೇಕಾಯಿತು. ರಮಣ ಮಹರ್ಷಿಗಳ ಶಿಷ್ಯರಲ್ಲಿ ಅನೇಕರು ಗಟ್ಟಿಗರಾಗಿದ್ದರು. ತುಡುಗರನ್ನು

ಎದುರಿಸಲು ಋಷಿಗಳ ಅಪ್ಪಣೆಯನ್ನು ಬೇಡಿದರು. ಅದಕ್ಕೆ ರಮಣ ಮಹರ್ಷಿಗಳು ಒಪ್ಪಲಿಲ್ಲ. ಶಾಂತಿಯಿಂದ ಇರಲು ಹೇಳಿದರು.

ರಮಣ ಮಹರ್ಷಿಗಳ ಶಿಷ್ಯರಲ್ಲಿ ಅನೇಕ ಧರ್ಮದವರಿರುವರು. ಯುರೋಪದಲ್ಲಿಯ ಎಷ್ಟೋ ಜನರು ಅವರ ಭಕ್ತರಾಗಿದ್ದರು. ಶಿಷ್ಯರಲ್ಲಿ ಜಾತಿಬೇಧವೆಣಿಸುವದು ಪಾಪವೆಂದು ಅವರು ತಿಳಿಯುವರು. ಇವರ ಶಿಷ್ಯರಲ್ಲಿ ಗಣಪತಿ ಶಾಸ್ತ್ರಿಗಳು ಅಗ್ರಗಣ್ಯರಾದವರು. ಇವರು ಸುಪ್ರಸಿದ್ಧ ಸಂಸ್ಕೃತ ಪಂಡಿತರೂ ಲೇಖಕರೂ ಎಂದು ಹೆಸರಾಗಿರುವರು. ಇವರು ಮದ್ರಾಸಿನಲ್ಲಿರುವಾಗ ಧ್ಯಾನಮಗ್ನರಾದಾಗ ಇವರಿಗೆ ರಮಣ ಮಹರ್ಷಿಗಳು ಬಂದು ಭೆಟ್ಟಿಯಿತ್ತು ಮಾತನಾಡಿದಂತೆ ಭಾಸವಾಯಿತು ಇವರು ಗುಡಿಯಲ್ಲಿ ಜ್ಞಾನಮಗ್ನರಾಗಿದ್ದಂತೆಯೂ ಇವರನ್ನು ತಾವು ಭೆಟ್ಟಿಯಾದುದಾಗಿಯೂ ರಮಣ ಮಹರ್ಷಿಗಳು ತಮ್ಮ ಆಶ್ರಮದಲ್ಲಿಯ ಜನರಿಗೆ ತಿಳಿಸಿದರು. ಮದ್ರಾಸಿನಲ್ಲಿಯ ಆ ಗುಡಿಯ ಯಥಾವತ್ತಾದ ವರ್ಣನೆಯನ್ನು ಕೇಳಿ ಆಶ್ರಮದ ಜನರಿಗೆ ಆಶ್ಚರ್ಯವಾಯಿತು. ರಮಣ ಮಹರ್ಷಿಗಳ ಶಿಷ್ಯನೊಬ್ಬನು ಬೇರೆ ಆಶ್ರಮವನ್ನೇ ಸ್ಥಾಪಿಸಿರುವನು ಇವನು ಧರ್ಮದಿಂದ ಮಹಮ್ಮದೀಯನು. ಮಹರ್ಷಿಗಳಿಂದ ಆಗಾಗ್ಗೆ ಸಲಹೆ ಪಡೆಯುವನು. ಕೇವಲ ಬ್ರಾಹ್ಮಣರೇ ಶಿಷ್ಯರಾಗಬಲ್ಲರು. ಎಂಬ ತತ್ವವನ್ನು ಮಹರ್ಷಿಗಳು ಒಪ್ಪುವದಿಲ್ಲ. ಎಲ್ಲ ಜಾತಿಯ ಜನರೂ ಇವರ ದರ್ಶನಕ್ಕೆ ಬರುವರು.

ಮನುಷ್ಯನು ಗಾಡಿಯಲ್ಲಿ ಹತ್ತಿದ ಬಳಿಕ ತನ್ನ ಸಾಮಾನುಗಳನ್ನು ತಲೆಯ ಮೇಲೆ ಹೊತ್ತುಕೊಳ್ಳಲಾರನು. ಇದರಂತೆಯೇ ಸಾಧಕನು ಸಿದ್ಧಿಯನ್ನು ಪಡೆಯಬೇಕಾದರೆ ಆಶೆಯನ್ನು ಬಿಟ್ಟುಬಿಡಬೇಕು. ಆಶೆಯಿದ್ದವನು ಸಿದ್ಧಿಯನ್ನು ಪಡೆಯಲಾರನು. ನಮ್ಮ ಕೆಲಸಗಳ ಭಾರವನ್ನು ಪರಮಾತ್ಮನೇ ಹೊತ್ತಿರುವನು. ಮನುಷ್ಯನು ಕೆಲಸಗಳನ್ನು ತಾನೇ ಮಾಡುವನೆಂದು ತಿಳಿಯುವನು. ಎಲ್ಲಕ್ಕೂ ಕರ್ತನು ಪರಮಾತ್ಮನು ಎಲ್ಲ ಹೊರೆಯನ್ನು ಪರಮಾತ್ಮನ ಮೇಲೆ ಹಾಕಿರಿ. ಪರಮಾತ್ಮನು ಮಾಡಿಸುವವನು. ನೀವು ಅವನ ಕೈಯಲ್ಲಿಯ ಆಯುಧವು ಮಾತ್ರ. ನಿಮಗೆ

ಯಾವ ಕೆಲಸವನ್ನು ಮಾಡಬೇಕಾದರೂ ಶಕ್ತಿ ಬೇಕು. ಆ ಶಕ್ತಿಯನ್ನು ಕೊಡುವವನು ಪರಮಾತ್ಮನು ಇದೇ ರಮಣ ಮಹರ್ಷಿಗಳ ತತ್ವಜ್ಞಾನ.

ರಮಣ ಮಹರ್ಷಿಗಳು ಮುಂಜಾನೆ ಮೂರು ಗಂಟೆಗೆ ಏಳುವರು. ಎದ್ದ ಕೂಡಲೇ ಸಾಮೂಹಿಕ ಪ್ರಾರ್ಥನೆ ನಡೆಯುವದು. ರಾತ್ರಿ ಒಂಬತ್ತು ಘಂಟೆಗೆ ಎಲ್ಲರೂ ನಿಯಮಿತವಾಗಿ ಮಲಗಿಕೊಳ್ಳುವರು. ಮುಂಜಾನೆ ಮೂರು ಘಂಟೆಯ ನಂತರ ಎಲ್ಲರೂ ಏಳಲೇಬೇಕು ಎಂಬ ನಿಯಮವಿದೆ. ಮುಂಜಾನೆಯ ಸಮಯವು ಪ್ರಾರ್ಥನೆಗೆ ಬಹಳ ಅನುಕೂಲವಾದ ಕಾಲ ವೆಂದು ಮಹರ್ಷಿಗಳು ಹೇಳುವರು.

ಪಶುಗಳ ಮೇಲೆ ಅವರಿಗೆ ಪ್ರೀತಿ ಬಹಳ. ಆಶ್ರಮದಲ್ಲಿ ಆಕಳು ಗಳನ್ನು ಸಾಕಿರುವರು. ಭಕ್ತರು ಕೊಟ್ಟ ಆಕಳುಗಳೂ ಅನೇಕವಿರುವವು. ಹಿಂಸ್ರ ಪಶುಗಳೂ ಗುಡ್ಡದಲ್ಲಿ ಇರುವವು. ಒಮ್ಮೆ ರಮಣ ಮಹರ್ಷಿಗಳ ಸಮೀಪದಲ್ಲಿಯೇ ಒಂದು ಹುಲಿಯು ನಿಂತುಕೊಂಡಿತ್ತು. ಸ್ವಾಮಿಗಳ ಕಡೆಗೆ ಬಹಳ ಹೊತ್ತು ನೋಡುತ್ತ ನಿಂತುಕೊಂಡಿತ್ತು. ಸ್ವಾಮಿಗಳಿಗೆ ಏನೂ ಅಪಾಯವನ್ನು ಮಾಡದೆ ಹೊರಟು ಹೋಯಿತು. ಈಗ ಆಶ್ರಮದ ಸುತ್ತಲೂ ತಂತಿಯನ್ನು ಹಾಕಿರುವರು.

ಸ್ವಾಮಿಗಳಿಗೆ ಹಣದ ಚಿಂತೆಯಿಲ್ಲ. ಹಣವನ್ನು ಕೂಡಿಡುವದು ಅವರಿಗೆ ಸೇರುವದಿಲ್ಲ. ನಾಳಿಗೆ ಏನು ಎಂಬ ಯೋಚನೆಯೂ ಅವರಿಗಿಲ್ಲ. ಪರಮಾತ್ಮನ ಮೇಲೆ ಎಲ್ಲ ಭಾರವನ್ನು ಹಾಕಿದರೆ ಎಲ್ಲವೂ ನಡೆಯುವದು ಎಂದು ಅವರ ಗ್ರಹಿಕೆ.

## ಸರದಾರ ವಲ್ಲಭಭಾಯಿ ಪಟೇಲ

ಸರದಾರ ಪಟೇಲರು ಉಕ್ಕಿನ ಮನುಷ್ಯರು. ಹಿಡಿದ ಕೆಲಸವನ್ನು ಪೂರ್ಣ ಮುಗಿಯದೆ ಬಿಡುವವರಲ್ಲ. ಪಟೇಲರಲ್ಲಿ ಇರಬೇಕಾದ ಗಡಸು ತನ, ಸರದಾರರಲ್ಲಿವೆ ಇವರು ಶಾಲೆಯಲ್ಲಿ ಓದುತ್ತಿರುವಾಗ ಶಿಕ್ಷಕ ರೊಬ್ಬರು ಎಲ್ಲ ಹುಡುಗರೂ ತಮ್ಮಲ್ಲಿಯೇ ಪುಸ್ತಕಗಳನ್ನು ಕೊಳ್ಳಬೇಕೆಂದು ಒತ್ತಾಯ ಪಡಿಸಿದರು. ವಲ್ಲಭಭಾಯಿಯವರು ಶಿಕ್ಷಕರ ಒತ್ತಾಯವನ್ನು

ಮನ್ನಿಸದೆ ಹರತಾಳ ಹೂಡಿದರು. ಶಾಲೆಯೊಳಗಿನ ಹುಡುಗರೆಲ್ಲರೂ ಹರತಾಳದಲ್ಲಿ ಭಾಗವಹಿಸಿದರು. ಶಿಕ್ಷಕರು ಸೋತು ಒಡಂಬಡಿಕೆ ಮಾಡಿಕೊಳ್ಳಬೇಕಾಯಿತು ಸರದಾರರಲ್ಲಿ ಅಂದಿನ ಹಟವು ಇನ್ನೂ ಇರುವದು. ವಲ್ಲಭಭಾಯಿಯವರು ಖಟ್ಲೆ ನಡಿಸುತ್ತಿರುವಾಗ ಒಂದು ತಂತಿ ಬಂದಿತು. ತಂತಿಯನ್ನು ಒಡೆದು ನೋಡಿದರು. ಹೆಂಡತಿಯ ಮರಣದ ವಾರ್ತೆ. ಆದರೂ ಖಟ್ಲೆಯನ್ನು ಕೊನೆಯವರೆಗೆ ನಡಿಸಿದರು. ಮಿತ್ರರು ತಂತಿಯಲ್ಲಿ ಏನು ಸುದ್ದಿಯಿತ್ತು ಎಂದು ಕೇಳಿದರು. ವಲ್ಲಭಭಾಯಿಯವರು ನಿಜ ಸಂಗತಿಯು ಹೇಳಲು ವಲ್ಲಭಭಾಯಿಯವರ ಮನೋಧೈರ್ಯವನ್ನು ಕಂಡು ಬೆರಗಾದರು.

ಇವರು ಬಡೋದೆಯ ಹಾಯಸ್ಕೂಲನಲ್ಲಿ ಓದುತ್ತಿರುವಾಗ ಸಂಸ್ಕೃತವನ್ನು ಬಿಟ್ಟು ಗುಜರಾತಿಯನ್ನು ತೆಗೆದುಕೊಂಡರು. ಆಗ ಶಿಕ್ಷಕರು 'ನೀನು ಸಂಸ್ಕೃತವನ್ನು ಬಿಟ್ಟು ಗುಜರಾತಿಯನ್ನು ತೆಗೆದುಕೊಂಡುದೇಕೆ?' ಎಂದು ಕೇಳಿದರು ವಲ್ಲಭಭಾಯಿಯವರು ತಟ್ಟನೆ ಎದ್ದು 'ಎಲ್ಲರೂ ಸಂಸ್ಕೃತ ತೆಗೆದುಕೊಂಡರೆ ನಿಮ್ಮ ಹೊಟ್ಟೆ ಹೇಗೆ ತುಂಬಬೇಕು ? ' ನಾವೆಲ್ಲರೂ ಸಂಸ್ಕೃತ ತೆಗೆದುಕೊಂಡರೆ ನೀವು ಕಲಿಸುವದಾದರೂ ಯಾರಿಗೆ ?' ಎಂದು ಕೇಳಿದರು.

ವಲ್ಲಭಭಾಯಿಯವರು ವಕೀಲಿ ಪರೀಕ್ಷೆಯಲ್ಲಿ ಪಾಸಾಗಿ ದೋಧ್ರಾನಲ್ಲಿ ವಕೀಲಿಯನ್ನು ಪ್ರಾರಂಭಿಸಿದರು. ವಕೀಲಿ ನಡಿಸಿ ಅನುಭವ ಪಡೆದರು ಬ್ಯಾರಿಸ್ಟರರಾಗಬೇಕೆಂದು ಮನಸ್ಸಾಯಿತು. ಆದರೆ ಹಣದ ವ್ಯವಸ್ಥೆಯನ್ನು ಹ್ಯಾಗೆ ಮಾಡುವದು ? ದುಡ್ಡು ಸಂಪಾದಿಸಿ ಇಂಗ್ಲಂಡಕ್ಕೆ ತೆರಳಲು ಸಿದ್ಧರಾದರು. ಆದರೆ ಇವರ ಅಣ್ಣಂದಿರು ಮೊದಲು ಇಂಗ್ಲಂಡಕ್ಕೆ ತೆರಳಿದರು. ಅವರು ಮರಳಿ ಬಂದ ಬಳಿಕ ವಲ್ಲಭಭಾಯಿಯವರು ಇಂಗ್ಲಂಡಕ್ಕೆ ಹೋದರು. ಬ್ಯಾರಿಸ್ಟರ ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಮೊದಲನೇ ನಂಬರು ದೊರಕಿಸಿದರು.

ಇಂಗ್ಲಂಡದಿಂದ ಮರಳಿಬಂದ ಬಳಿಕ ಅಹಮ್ಮದಾಬಾದದಲ್ಲಿ ವಕೀಲಿಯನ್ನು ಪ್ರಾರಂಭಿಸಿದರು. ವಕೀಲಿಯನ್ನು ಮಾಡುತ್ತಿರುವಾಗ ಗಾಂಧೀಜಿಯವರನ್ನು ಯಥೇಚ್ಛವಾಗಿ ನಿಂದಿಸುತ್ತಿದ್ದರು ಗಾಂಧೀ ವಾದವು ಇವ

ರಿಗೆ ಸರಿ ಬರುತ್ತಿರಲಿಲ್ಲ. ಗಾಂಧೀಜಿಯವರ ತತ್ವಗಳೆಲ್ಲವೂ ಅವ್ಯವಹಾರ್ಯವಾಗಿರುವವೆಂದು ನುಡಿಯುತ್ತಿದ್ದರು.

ಚಂಪಾರಣ್ಯದಲ್ಲಿ ಮಹಾತ್ಮರು ಮಾಡಿದ ಕಾರ್ಯದಿಂದ ವಲ್ಲಭಭಾಯಿಯವರ ಕಣ್ಣು ತೆರೆದವು. ಗೋಧ್ರಾದಲ್ಲಿ ರಾಜಕೀಯ ಪರಿಷತ್ತು ನೆರೆಯಿತು. ವಲ್ಲಭಭಾಯಿಯವರು ಅದರ ಕಾರ್ಯದರ್ಶಿಗಳಾಗಿದ್ದರು. ಗಾಂಧೀಜಿಯವರು ಅಧ್ಯಕ್ಷರಾಗಿದ್ದರು. ಈ ಪರಿಷತ್ತಿನಲ್ಲಿ ಮಹಾತ್ಮಾಜಿಯವರ ಪ್ರಭಾವವು ಪಟೇಲರ ಮೇಲೆ ಆಯಿತು. ಅಂದಿನಿಂದ ವಲ್ಲಭಭಾಯಿಯವರು ಗಾಂಧೀಜಿಯವರ ಶಿಷ್ಯರಾದರು.

೧೯೧೮ರಲ್ಲಿ ಖೇಡಾ ಜಿಲ್ಹೆಯಲ್ಲಿ ಬೆಳೆಯು ಬರಲಿಲ್ಲ. ಜನರ ಪರಿಸ್ಥಿತಿಯು ಬಹಳ ಚಿಂತಾಜನಕವಾಯಿತು. ಬರ ಬೀಳುವ ಅಂಜಿಕೆಯು ಉತ್ಪನ್ನವಾಯಿತು. ನಾಲ್ಕಾಣೆಗಿಂತಲೂ ಕಡಿಮೆ ಬೆಳೆ ಬಂದರೆ ತೆರಿಗೆಯನ್ನು ಸೂಟು ಬಿಡಬೇಕೆಂದು ನಿಯಮವಿರುವದು. ನಾಲ್ಕಾಣೆಗಿಂತಲೂ ಕಡಿಮೆ ಬೆಳೆ ಬಂದಿರುವದೆಂದು ಜನರು ಹೇಳಿದರು. ಸರಕಾರವು ಇದನ್ನು ಒಪ್ಪದೆ ರೈತರು ತೆರಿಗೆಯನ್ನು ಕೊಡಲೇಬೇಕೆಂದು ಹೇಳಿತು. ರೈತರು ನಿರುಪಾಯರಾದರು. ಮಹಾತ್ಮಾಜಿಯವರು ರೈತರಿಗೆ ತೆರಿಗೆಯನ್ನು ಕೊಡಕೂಡದೆಂದು ಹೇಳಿದರು. ವಲ್ಲಭಭಾಯಿಯವರು ಖೇಡಾ ಜಿಲ್ಹೆಯಲ್ಲಿ ಸಂಚರಿಸಿ ಜನರು ನಿರ್ಭಯರಾಗಿರಬೇಕೆಂದು ಹೇಳಿದರು. ತೆರಿಗೆಯನ್ನು ಕೊಡಕೂಡದೆಂದು ಭೋಧಿಸಿದರು. ರೈತರು ಧೀರತನದಿಂದ ತೆರಿಗೆಯನ್ನು ಕೊಡುವದಿಲ್ಲವೆಂದು ಸರಕಾರಕ್ಕೆ ಸೂಚಿಸಿದರು. ಸರಕಾರವು ಅನೇಕ ಜನರನ್ನು ಬಂಧಿಸಿದರು. ಆದರೆ ರೈತರು ಹಿಂಜರಿಯಲಿಲ್ಲ. ಕಡೆಗೆ ಸರಕಾರವು ತೆರಿಗೆಯನ್ನು ಸೂಟು ಬಿಡಬೇಕಾಯಿತು. ಇದು ವಲ್ಲಭಭಾಯಿಯವರ ಮೊದಲನೇ ವಿಜಯ. ಜನರು ಎಚ್ಚತ್ತರು; ಜನರಿಗೆ ಇದು ಮೊದಲನೇ ರಾಜಕೀಯ ಶಿಕ್ಷಣವಾಯಿತು. ತಮ್ಮ ಹಕ್ಕು ಬಾಧ್ಯತೆಗಳ ಸಲುವಾಗಿ ಹೋರಾಡುವದನ್ನು ಕಲಿತರು.

ಸರದಾರ ಪಾಟೀಲರು ಅಹಮ್ಮದಾಬಾದ ನಗರ ಸಭೆಯ ಅಧ್ಯಕ್ಷರಾದರು. ನಗರ ಸಭೆಯಲ್ಲಿ ಪಕ್ಷಗಳ ಗೊಂದಲ ಬಹಳ. ಅಧಿಕಾರದಾಸೆಯುಳ್ಳ ಜನರೇ ಹೆಚ್ಚು. ಸೇವೆ ಮಾಡಬೇಕೆಂಬ ಇಚ್ಛೆಯುಳ್ಳ ಜನರ

ಸಂಖ್ಯೆ ಅತಿ ಕಡಿಮೆ. ಪಟೇಲರು ನಗರ ಸಭೆಯಲ್ಲಿಯ ಕೊಳಚೆಯನ್ನೆಲ್ಲ ತೆಗೆದು ಹಾಕಿದರು. ಶಿಸ್ತು ಅವರಿಗೆ ಬಹಳ ಪ್ರಿಯವಾದುದು. ಶಿಸ್ತು ಭಂಗ ಮಾಡುವವರನ್ನು ಅವರು ಎಂದಿಗೂ ಸಹಿಸಲಾರರು. ಗುಜರಾತದಲ್ಲಿ ೧೯೨೭ ರಲ್ಲಿ ಅತಿಶಯ ಮಳೆಯಾಯಿತು. ೫೦ ಇಂಚಿಗಿಂತಲೂ ಹೆಚ್ಚು ಮಳೆಯಾಯಿತು. ಎಲ್ಲಕಡೆಗೂ ನೀರೇ ನೀರಾಯಿತು. ಜನರು ದಿಕ್ಕು ಕಾಣದಾದರು. ಮನೆಗಳೆಲ್ಲವೂ ತೇಲಿ ಹೋದವು; ಜನರು ನಿರಾಧಾರಿಗಳಾದರು. ಸರದಾರರು ಈ ಸಮಯದಲ್ಲಿ ಮುಂದೆ ಬಂದರು. ಸ್ವಯಂಸೇವಕರ ಪಡೆಗಳನ್ನು ನೇಮಿಸಿ ಎಲ್ಲರಿಗೂ ಸಹಾಯ ದೊರೆಯುವಂತೆ ಮಾಡಿದರು. ಇವರ ಕೆಲಸವನ್ನು ಸರಕಾರವೂ ಮುಕ್ತ ಕಂಠದಿಂದ ಹೊಗಳಿದರು. ಸರಕಾರೀ ಅಧಿಕಾರಿಗಳೂ ಸ್ವಯಂಸೇವಕರ ಸಹಾಯವನ್ನು ಪಡೆದರು. ಮಹಾತ್ಮಾ ಗಾಂಧೀಜಿಯವರು ವಿಶ್ರಾಂತಿಗಾಗಿ ಮೈಸೂರಲ್ಲಿ ತಂಗಿದ್ದರು. ಅವರು ಇಂಥ ಸಮಯದಲ್ಲಿ ಗುಜರಾತಕ್ಕೆ ತಿರುಗಿ ಬರುವದಾಗಿ ಬರೆದರು. ವಲ್ಲಭಭಾಯಿಯವರು ಗಾಂಧೀಜಿಯವರಿಗೆ ತಿರುಗಿ ಬರುವ ಅವಶ್ಯಕತೆಯಿಲ್ಲವೆಂದು ತಿಳಿಸಿದರು. ಗಾಂಧೀಜಿಯವರ ಸಲಹೆಯಂತೆ ತಾವೆಲ್ಲವೂ ಕೆಲಸ ಮಾಡುವರಾಗಿ ವಲ್ಲಭಭಾಯಿಯವರು ತಿಳಿಸಿದರು. ಗಾಂಧೀಜಿಯವರು ಹತ್ತರ ಇಲ್ಲದಾಗ ಅವರ ಶಿಷ್ಯರೂ ಯಾವ ಪ್ರಕಾರ ನಡೆಯುವರೆಂಬುದಕ್ಕೆ ಗುಜರಾತವು ಉದಾಹರಣೆಯಾಯಿತು.

೧೯೨೮ ರಲ್ಲಿ ಸರಕಾರವು ರೈತರನ್ನು ಕೇಳದೆ ಬಾರ್ಡೋಲಿ ತಾಲೂಕಿನ ತೆರಿಗೆಯನ್ನು ೧೦೦ಕ್ಕೆ ೨೦ರಂತೆ ಏರಿಸಿತು. ಸರದಾರರು ರೈತರ ಮುಖಂಡರಾಗಿ ರೈತರು ಸರಕಾರದ ಈ ಅನ್ಯಾಯದ ವಿರುದ್ಧವಾಗಿ ಸತ್ಯಾಗ್ರಹ ಹೂಡಬೇಕೆಂದು ಹೇಳಿದರು. ಸತ್ಯಾಗ್ರಹವು ಆರಂಭವಾಯಿತು. ವಲ್ಲಭಭಾಯಿ ಪಟೇಲರ ಯತ್ನದಿಂದ ಅಧಿಕಾರಿಗಳಿಗೆ ಕುಡಿಯಲು ನೀರು ಸಹ ದೊರೆಯದಂತಾಯಿತು. ಸರಕಾರವು ಪಾಶವೀಶಕ್ತಿಯಿಂದ ಸತ್ಯಾಗ್ರಹವನ್ನು ಮುರಿಯಲು ಪ್ರಯತ್ನಿಸಿತು. ಹೊಲಗಳನ್ನು ಜಪ್ತಮಾಡಿತು. ಮನೆ ಮನೆ ಹೊಕ್ಕು ದನಕರುಗಳನ್ನು ಕಸಿದುಕೊಂಡು ಮಾರಿದರು. ಆದರೂ ರೈತರು ಹಿಂಜರಿಯಲಿಲ್ಲ. ೮೦೦೦೦ ರೈತರು ಸರಕಾರದ ವಿರುದ್ಧವಾಗಿ ಕಾದುವದಾಗಿ ನಿಶ್ಚಯಿಸಿದ್ದರು. ಯಾವ ತೊಂದರೆಗೂ ಅವರು

ಅಂಜಲಿಲ್ಲ. ಸರಕಾರವು ಬೇರೆ ಪ್ರದೇಶಗಳಿಂದ ಪಠಾಣರನ್ನು ಕರೆದುಕೊಂಡು ಬಂದು ಅವರನ್ನು ದನಕಾಯುವದಕ್ಕೆ ಕಾವಲಿಟ್ಟರು. ಮುಂಬಯಿ ಪ್ರಾಂತದ ಗುಜರಾತದ ಸದಸ್ಯರು ಕೆಳಮನೆಯ ಸದಸ್ಯತ್ವಕ್ಕೆ ರಾಜೀನಾಮೆ ಕೊಟ್ಟರು. ವಲ್ಲಭಭಾಯಿಯವರ ಅಣ್ಣಂದಿರಾದ ವಿಠ್ಠಲಭಾಯಿ ಪಟೇಲರು ವ್ಹಾಯಿಸರಾಯರು ಇದರಲ್ಲಿ ಕೈ ಹಾಕಬೇಕೆಂದು ಕೇಳಿಕೊಂಡರು. ಜನರಲ್ಲಿ ಅಸಮಾಧಾನವು ಬೆಳೆಯತೊಡಗಿತು.

ಮುಂಬಯಿ ಪ್ರಾಂತದ ಸಾಮಾನ್ಯಸಭೆಯ ಸದಸ್ಯರಾದ ಕೆ. ಎಂ. ಮುನಶಿಯವರು ಬಾರ್ಡೋಲಿಗೆ ಬಂದರು. ಮುಂಬಯಿ ಗವ್ಹರನರರಿಗೆ ಬರೆದ ಪತ್ರದಲ್ಲಿ ಅವರು ಬಾರ್ಡೋಲಿಯ ಪರಿಸ್ಥಿತಿಯನ್ನು ಹೃದಯಂಗಮವಾಗಿ ವರ್ಣಿಸಿರುವರು. "ಅಧಿಕಾರಿಗಳ ಮೇಲೆ ಜನರು ಸಂತಪ್ತರಾಗಿರುವರು. ಜಪ್ತಿಮಾಡಲು ಬಂದ ಅಧಿಕಾರಿಗಳಿಗೆ ಯಾರ ಸಹಾಯವೂ ಇಲ್ಲ. ಅಧಿಕಾರಿಯ ಮೋಟಾರು ಹುದಲಲ್ಲಿ ಸಿಕ್ಕಿಕೊಂಡಾಗ ವಲ್ಲಭಭಾಯಿಯವರ ಸಹಾಯವಿಲ್ಲದಿದ್ದರೆ ಆ ಮೋಟಾರು ಹುದಲುಬಿಟ್ಟು ಹೊರಗೆ ಬರುತ್ತಿರಲಿಲ್ಲ. ನೀವು ಎಲ್ಲ ಭೂಮಿಯನ್ನು ಗರ್ಡನಿಗೆ ಮಾರಿರುವಿರಿ. ಅವನ ಮನೆಗೆ ಭಂಗಿಯೂ ಬರಲೊಲ್ಲನು. ಕಲೆಕ್ಟರರಿಗೆ ವಾಹನವೂ ದೊರೆಯದಂತಾಗಿದೆ. ನಿಮ್ಮ ಆಡಳಿತೆಯು ಅಪಹಾಸ್ಯಕ್ಕೀಡಾಗಿರುವದು. ವಲ್ಲಭಭಾಯಿಯವರ ಸಹಾಯವಿಲ್ಲದೆ ಯಾವ ಕೆಲಸವೂ ಇಲ್ಲ. ನಡೆಯಲಾರದು. ಜನರೆಲ್ಲರೂ ಊರನ್ನು ಬಿಡುತ್ತಿರುವರು."

ಟಾಯಿಮ್ಸ ಪತ್ರಿಕೆಯು ಪಟೇಲರ ವಿರುದ್ಧವಾಗಿ ಲೇಖವನ್ನು ಬರೆದು ಪಟೇಲರು ಲೆನಿನ್‌ನಂತೆ ಬಾರ್ಡೋಲಿಯಲ್ಲಿ ಸೋವ್ಹಿಯಟ್ ಪದ್ಧತಿಯ ರಾಜ್ಯವನ್ನು ಸ್ಥಾಪಿಸಬೇಕೆಂದು ಹವಣಿಸುತ್ತಿರುವರೆಂದು ಒರೆಯಿತು. ವಲ್ಲಭಭಾಯಿಯವರು ಬಾರ್ಡೋಲಿಯಲ್ಲಿ ಇರುವವರೆಗೆ ಶಾಂತಿ ಸ್ಥಾಪಿಸುವದು ಅಸಾಧ್ಯವೆಂದು ಸಾರಿತು. ಇಂಗ್ಲಂಡದಲ್ಲಿಯೂ ಈ ಸುದ್ದಿಯು ಹಬ್ಬಿತು. ಬಾರ್ಡೋಲಿಯಲ್ಲಿ ಮಿಲಿಟರಿ ಆಡಳಿತವು ಬರುವದೆಂದು ಸುದ್ದಿಯಾಯಿತು. ಕಡೆಗೆ ಗವ್ಹರನರನು ಸಿಮ್ಲಾಕ್ಕೆ ಹೋಗಿ ವ್ಹಾಯಿಸರಾಯರ ಭೆಟ್ಟಿಯಾಗಿ ಬಂದನು. ಪಟೇಲರಕೂಡ ಒಪ್ಪಂದದ ಮಾತುಕತೆಗಳು ಆರಂಭವಾದವು. ಸರಕಾರವು ಸೆರೆ ಹಿಡಿದವರನ್ನು

ಬಿಟ್ಟುಬಿಟ್ಟಿತು. ವಿಚಾರಣೆ ಮಾಡಲು ಒಂದು ಕಮೀಟಿಯನ್ನು ನಿಯಮಿಸಿತು. ಕಮೀಟಿಯು ಕೆರಿಗೆಯನ್ನು ೧೦೦ಕ್ಕೆ ೬ಕ್ಕಿಂತ ಹೆಚ್ಚು ಮಾಡಲು ಬರುವದಿಲ್ಲವೆಂದು ತೀರ್ಪುಕೊಟ್ಟಿತು. ಅಂದಿನಿಂದ ಪಟೇಲರಿಗೆ 'ಸರದಾರ' ಎಂಬ ಬಿರುದು ದೊರೆಯಿತು.' ಬಾರ್ಡೋಲಿಯ ಸರದಾರರು ಭಾರತದ ಸರದಾರರಾದರು.

ಕರಾಚಿಯಲ್ಲಿ ನೆರೆದ ರಾಷ್ಟ್ರೀಯ ಮಹಾಸಭೆಗೆ ಅಧ್ಯಕ್ಷರಾಗಿ ಆಯ್ಕೆ ಹೊಂದಿದರು. ಗೃಹಮಂತ್ರಿಗಳಾಗಿ ಸರದಾರರು ಮಾಡಿದ ಕಾರ್ಯವು ಅಮೋಘವಾದುದು. ಬ್ರಿಟಿಶರು ಹಿಂದುಸ್ತಾನವನ್ನು ಬಿಟ್ಟು ಹೋದಾಗ ಇಲ್ಲಿ ೫೬೦ ಸಂಸ್ಥಾನಗಳಿದ್ದವು. ಈ ಸಂಸ್ಥಾನಗಳ ರಾಜರು ಸ್ವತಂತ್ರರಾದರು. ಸರದಾರರು ವಜ್ರಮುಷ್ಠಿಯಿಂದ ಸಂಸ್ಥಾನಗಳ ವಿಲೀನೀಕರಣವನ್ನು ಸಾಧಿಸಿದರು. ಭಾರತದ ಐಕ್ಯವನ್ನು ಕಾಪಾಡುವದಕ್ಕಾಗಿ ಹೆಣಗಿದರು. ಸರದಾರರ ಮುತ್ಸದ್ದಿತನದಿಂದಲೇ ಬಹಳ ಸಂಸ್ಥಾನಗಳು ಮಾಯವಾದವು.

ಸರದಾರರು ಅಮರರಾದರು! ಅವರ ಕನಸನ್ನು ಕೃತಿಗಿಳಿಸುವ ಕಾಲವೀಗ ಬಂದಿದೆ.

## ರಾಜಗೋಪಾಲಾಚಾರ್ಯ

ರಾಜಾಜಿಯವರು ಶ್ರೇಷ್ಠರಾದ ರಾಜಕಾರಣಿಗಳು. ಮಹಾತ್ಮಾ ಗಾಂಧೀಜಿಯವರು ಆಗಾಗ್ಗೆ ರಾಜಾಜಿಯವರ ಸಲಹೆ ಕೇಳುತ್ತಿದ್ದರು. ರಾಜಾಜಿಯವರು ಕಾಂಗ್ರೆಸ್ಸಿನ ನಿಸ್ಸೀಮ ಭಕ್ತರು. ಆದರೆ ಮಹಾತ್ಮಾಜಿಯವರ ಕೂಡವಾಗಲೀ, ಕಾಂಗ್ರೆಸ್ಸಿನಗೂಡವಾಗಲೀ ಮತಭೇದವಾದಾಗ ಸ್ಪಷ್ಟವಾಗಿಯೂ ಖಂಡಿತವಾಗಿಯೂ ತಮ್ಮ ಮತಭೇದವನ್ನು ವ್ಯಕ್ತಪಡಿಸುತ್ತಿದ್ದರು. ೧೯೪೨ ರಲ್ಲಿ ರಾಜಾಜಿಯವರು ಕಾಂಗ್ರೆಸ್ಸಿನ ಕೂಡ ಮತಭೇದವಾದ್ದರಿಂದ ಕಾಂಗ್ರೆಸ್ಸಿನಿಂದ ದೂರ ನಿಂತರು. ಆದರೆ ಅವರೆಂದಿಗೂ ಹೊಸ ಪಕ್ಷವನ್ನು ಕಟ್ಟಲಿಲ್ಲ. ಪಾಕಿಸ್ತಾನವನ್ನು ಮನ್ನಿಸುವದು ಯೋಗ್ಯವೆಂದು ಮೊದಲನೇ ಸಲ ಪಾಕಿಸ್ತಾನಕ್ಕೆ ಒಪ್ಪಿಗೆ ಕೊಡಲು ಕಾಂಗ್ರೆಸ್ಸನ್ನು

ಕೇಳಿಕೊಂಡರು  ಆದರೆ ಕಾಂಗ್ರೆಸ್ ಮುತ್ಸದ್ದಿಗಳು ಇದಕ್ಕೆ ಒಪ್ಪಲಿಲ್ಲ ! ಹಿಂದುಗಡೆಯಿಂದ ಒಪ್ಪಿದರು !!

ಮುಂಬಯಿಯಲ್ಲಿ ಅವರು ಭಾಷಣ ಮಾಡುತ್ತಿದ್ದಾಗ ಕೆಲವರು ಪುಂಡರು ಅವರ ಮೇಲೆ ಡಾಂಬರು ಗೊಜ್ಜಿದರು. ರಾಜಾಜಿಯವರು ನಗುತ್ತ—'ನನ್ನ ಬಣ್ಣವು ಡಾಂಬರದಂತಿರುವದು; ಅದು ನನಗೆ ಒಪ್ಪುವದು. ದೇಶಕ್ಕಾಗಿ ನಾನು ಇದಕ್ಕೂ ಹೆಚ್ಚಿನ ತೊಂದರೆಯನ್ನು ಎದುರಿಸಲು ಸಿದ್ಧನಿರುವೆನು' ಎಂದರು ಹೀಗೆ ಸಮಾಧಾನದಿಂದ ಜನರು ಕೊಟ್ಟ ತೊಂದರೆಗಳನ್ನೆಲ್ಲ ಸಹಿಸಿಕೊಂಡು, ನಿಂದೆಗಳಿಗೆ ಬೆದರದೆ ದೇಶ ಸೇವೆ ಮಾಡುವದು ಸುಲಭವಾದ ಕಾರ್ಯವಲ್ಲ. ವಿರೋಧಿಗಳನ್ನು ಅವರು ಸೌಮ್ಯ ನೀತಿಯಿಂದಲೇ ಗೆದೆಯಬಲ್ಲರು. ಒಬ್ಬ ತಲೆತಿರುಕನು ಅವರ ಮೇಲೆ ಬಡಿಗೆ ಒಗೆದನು. ರಾಜಾಜಿಯವರು ಅವನೊಬ್ಬನೇ ತಮ್ಮ ಪ್ರೀತಿಯ ಮಿತ್ರನೆಂದು ಹೇಳಿದರು !

ರಾಜಾಜಿಯವರು ಹಿಂದುಸ್ತಾನ ಗವ್ಹರ್ನರ ಜನರಲ್‌ರಾದರೂ ಅವರು ಉಡುವದು ಒಂದು ಧೋತರ, ತೊಟ್ಟುಕೊಳ್ಳುವದು ಒಂದು ಸಾದಾ ಅಂಗಿ ! ಅವರು ಮದ್ರಾಸ ಪ್ರಾಂತದ ಮುಖ್ಯ ಮಂತ್ರಿಗಳಾಗಿದ್ದರು ಬಂಗಾಲ ಪ್ರಾಂತದ ಗವ್ಹರ್ನರರಾಗಿದ್ದರು.

## ಮೌಲಾನಾ ಅಬುಲ್ ಕಲಮ್ ಅಝಾದ

ಅಝಾದರು ಮಕ್ಕಾದಲ್ಲಿ ೧೮೮೮ರಲ್ಲಿ ಜನಿಸಿದರು. ಚಿಕ್ಕಂದಿನಲ್ಲಿಯೇ ಪಾರಶೀ, ಅರಬೀ ಭಾಷೆಗಳಲ್ಲಿ ಪಾಂಡಿತ್ಯವನ್ನು ಸಂಪಾದಿಸಿದರು. 'ಕುರಾನ' ವನ್ನು ಉರ್ದು ಭಾಷೆಗೆ ಭಾಷಾಂತರಿಸಿ ಸಾಮಾನ್ಯ ಜನರಿಗೂ 'ಕುರಾನ'ವು ತಿಳಿಯುವಂತೆ ಮಾಡಿದರು, ಅವರ ಶಿಕ್ಷಣವೆಲ್ಲವೂ ಕಾಯರೊ ವಿಶ್ವವಿದ್ಯಾನಿಲಯದಲ್ಲಾಯಿತು. ರಾಜಕಾರಣದಲ್ಲಿ ಭಾಗ ತೆಗೆದುಕೊಳ್ಳದಿದ್ದರೆ ಪಂಡಿತರೆಂದು ಹೆಸರಾಗುತ್ತಿದ್ದರು. ಅಝಾದರ ತಂದೆಯವರು ಅರಬೀ ಭಾಷೆಯಲ್ಲಿ ಇಸ್ಲಾಮ ತತ್ವದ ಬಗ್ಗೆ ಅನೇಕ ಗ್ರಂಥಗಳನ್ನು ಬರೆದಿರುವರು. ಅವೆಲ್ಲವೂ ಇಂದಿಗೂ ಪ್ರಮಾಣ ಗ್ರಂಥಗಳಾಗಿರುವವು.

ಚಿಕ್ಕ ವಯಸ್ಸಿನಲ್ಲಿ ಆಝಾದರು ಇರಾಣ, ಇರಾಕ, ಇಜಿಪ್ತ ದೇಶಗಳನ್ನು ಸಂಚರಿಸಿ ಅವುಗಳ ಸಂಸ್ಕೃತಿಯನ್ನು ಅರಿತುಕೊಂಡರು. ಆಝಾದರು ರಾಷ್ಟ್ರೀಯ ವೃತ್ತಿಯವರು. ಮುಸಲ್ಮಾನ ಮತ್ತು ಹಿಂದೂಗಳಲ್ಲಿ ಐಕ್ಯತೆಯು ಅವಶ್ಯವೆಂದು ಇವರು ಮನಗಂಡಿದ್ದರು ಜಾತೀಯ ಸಂಸ್ಥೆಗಳನ್ನು ಕಟ್ಟುವದರಿಂದ ಹಿತವಿಲ್ಲವೆಂದು ಅವರಿಗೆ ಮನವರಿಕೆಯಾಗಿತ್ತು. ಮುಸಲ್ಮಾನರಲ್ಲಿ ಜಾಗೃತಿಯನ್ನುಂಟು ಮಾಡುವದಕ್ಕಾಗಿ ಕಲಕತ್ತೆಯಲ್ಲಿ 'ಅಲ್ ಹಿಲಾಲ್' ಎಂಬ ವೃತ್ತಪತ್ರಿಕೆಯನ್ನು ಹೊರಡಿಸಿದರು. ಉರ್ದು ಭಾಷೆಯಲ್ಲಿ ನವಮನ್ವಂತರವನ್ನು ಪ್ರಚಾರದಲ್ಲಿ ತಂದರು. ಅವರ ಭಾಷೆ ಸರಳ ಸುಂದರವಾಗಿರುವದು. ಇಂಗ್ಲೀಷರಿಗೆ ಹಿಂದು ಮುಸ್ಲಿಮ ಐಕ್ಯವು ಬೇಕಾಗಿರಲಿಲ್ಲ ಅವರು ಒಕ್ಕಟ್ಟಾದರೆ ತಮಗೆ ಹಿಂದುಸ್ಥಾನದಲ್ಲಿ ನೆಲಿಸಲು ಆಸ್ಪದ ಸಿಗಲಾರದೆಂದು ಬಗೆದು ಹಿಂದೂ–ಮುಸ್ಲಿಮರಲ್ಲಿ ಜಗಳ ಉತ್ಪನ್ನ ಮಾಡಲು ಪ್ರಯತ್ನಿಸುತ್ತಿದ್ದರು 'ಅಲ್ ಹಿಲಾಲ' ವು ಮುಸಲ್ಮಾನರಲ್ಲಿ ರಾಷ್ಟ್ರೀಯ ವೃತ್ತಿಯನ್ನು ಪ್ರಚಾರ ಮಾಡುವದನ್ನು ಕಂಡು ಆ ಪತ್ರಿಕೆಯಿಂದ ೧೦ ಸಾವಿರ ರೂಪಾಯಿ ಮುಚ್ಚಳಿಕೆಯನ್ನು ಕೇಳಿದರು ಆಝಾದರು ಪತ್ರಿಕೆಯನ್ನು ನಿಲ್ಲಿಸಿದರು.

೧೯೨೦ ರಲ್ಲಿ ಮುಂದಾಳುಗಳ ಸಭೆಯು ಅಸಹಕಾರ ಚಳವಳಿಯ ಬಗ್ಗೆ ವಿಚಾರ ಮಾಡಲು ಕೂಡಿತ್ತು. ಈ ಸಭೆಗೆ ಮಹಾತ್ಮಾ ಗಾಂಧಿ, ಲಾಲಾ ಲಜಪತರಾಯ, ಹಕೀಮ ಅಜಮಲಖಾನ, ಮತ್ತು ಅಬುಲ್ ಕಲಮ ಆಝಾದ ಇವರು ಬಂದಿದ್ದರು ಆಝಾದರು ಗಾಂಧೀಜಿಯವರ ಅಸಹಕಾರವು ಯಶಸ್ವಿಯಾಗುವದಕ್ಕಾಗಿ ಬಹಳ ದುಡಿದರು.

೧೯೨೧ ರಲ್ಲಿ ಯುವರಾಜರ ಬಹಿಷ್ಕಾರದಲ್ಲಿ ಭಾಗ ವಹಿಸಿದ್ದಕ್ಕಾಗಿ ಆಝಾದರಿಗೆ ೧ ವರ್ಷ ಶಿಕ್ಷೆಯಾಯಿತು ೧೯೪೦ ರಲ್ಲಿ ರಾಮಘರ ಕಾಂಗ್ರೆಸ್ಸಿನ ಅಧ್ಯಕ್ಷರಾದವರು ಸತತವಾಗಿ ೫ ವರ್ಷಗಳ ವರೆಗೆ ಅಧ್ಯಕ್ಷರಾಗಿಯೇ ಉಳಿದರು ಧಾರ್ಮಿಕ ಕೊಲೆಗಳನ್ನು ನಿಷೇಧಿಸಿರುವರು. ಧರ್ಮದ ಹೆಸರಿನಲ್ಲಿ ನಡೆಯುವ ಕೊಲೆ, ಸುಲಿಗೆಗಳನ್ನು ಅವರು ಸಹಿಸಲಾರರು. ಇವರು ಕಾಂಗ್ರೆಸ್ಸಿನ ನಿಸ್ಸೀಮ ಸೇವಕರು.

ಮೌಲಾನಾ ಆಝಾದರು ಹಿಂದುಸ್ಥಾನದ ಶಿಕ್ಷಣ ಮಂತ್ರಿಗಳಾಗಿರುವರು. ಇಸ್ಲಾಮ ಧರ್ಮದ ಬಗ್ಗೆ ಅನೇಕ ಪುಸ್ತಕಗಳನ್ನು ಬರೆದಿರುವರು.

## ಸರೋಜಿನಿ ನಾಯಿಡು

ಸರೋಜಿನಿ ದೇವಿಯವರು ಭಾರತದ ಕೋಗಿಲೆ ಎಂದು ಹೆಸರಾಗಿದ್ದರು. ಮಹಿಳೆಯರಲ್ಲಿ ಸರೋಜಿನಿ ದೇವಿಯವರೇ ಮೊದಲನೇ ಗವ್ಹರ್ನರರು. ಅವರಷ್ಟು ಲೋಕಪ್ರಿಯರಾದ ಮಹಿಳೆಯರು ಕಾಂಗ್ರೆಸ್ಸಿನಲ್ಲಿ ಬೇರೆ ಯಾರೂ ಇಲ್ಲ. ಅವರು ರಾಜಕಾರಣದಲ್ಲಿ ಭಾಗ ತೆಗೆದುಕೊಳ್ಳದೆ ಕವಿತೆ ಬರೆಯುವದರಲ್ಲಿಯೇ ತಮ್ಮ ವೇಳೆಯನ್ನು ವೆಚ್ಚ ಮಾಡಿದ್ದರೆ ಅವರು ಇಷ್ಟೇ ಪ್ರಸಿದ್ಧರಾಗಬಹುದಿತ್ತೇನೋ ! ಆದರೆ ಮಹಾತ್ಮರ ಕರೆಗೆ ಓಗೊಟ್ಟು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿದರು. ಮಹಾತ್ಮರು ಅನ್ನ ಸತ್ಯಾಗ್ರಹ ಹೂಡಿದಾಗ ಈ ಕವಿಯತ್ರಿಯು ಅವರ ಶುಶ್ರೂಷೆ ಮಾಡುತ್ತಿದ್ದಳು. ಮಹಾತ್ಮರ ತೀರ ನಿಕಟವರ್ತಿಗಳಲ್ಲಿ ಒಬ್ಬರಾಗಿ ಅವರ ವಿಶ್ವಾಸಕ್ಕೆ ಪಾತ್ರರಾಗಿದ್ದರು.

ಸರೋಜಿನಿಯವರ ತಂದೆಯವರು ನೈಜಾಮ ಕಾಲೇಜನ್ನು ಸ್ಥಾಪಿಸಿ ತಮ್ಮ ಜೀವನವನ್ನು ಶಿಕ್ಷಣಪ್ರಪಂಚದಲ್ಲಿಯೇ ಕಳೆದರು. ೧೮೭೯ನೇ ಇಸ್ವಿಯಲ್ಲಿ ಹೈದರಾಬಾದದಲ್ಲಿ ಸರೋಜನಿಯವರು ಜನ್ಮಿಸಿದರು. ೧೨ನೇ ವಯಸ್ಸಿನಲ್ಲಿಯೇ ಮ್ಯಾಟ್ರಿಕ್ ಪರೀಕ್ಷೆಯನ್ನು ಪಾಸಾದರು. ೧೮೯೫ರಲ್ಲಿ ಇಂಗ್ಲಂಡಕ್ಕೆ ತೆರಳಿ ೧೮೯೮ರ ವರೆಗೆ ಇಂಗ್ಲಂಡದಲ್ಲಿ ಶಿಕ್ಷಣವನ್ನು ಪಡೆದರು. ಇಂಗ್ಲಂಡದಿಂದ ಮರಳಿ ಬಂದ ಬಳಿಕ ಸರೋಜನಿಯವರು ಬೇರೆ ಜಾತಿಯವರೊಬ್ಬರನ್ನು ಮದಿವೆಯಾದರು. ಇದು ೧೮೯೮ರಲ್ಲಿಯ ಘಟನೆ ! ಜನರ ಬಹಿಷ್ಕಾರಕ್ಕೆ ಸರೋಜಿನಿಯವರು ಹೆದರಲಿಲ್ಲ.

ಸರೋಜನಿಯವರು ೧೧ ವರ್ಷದವರಿರುವಾಗಲೇ 'ಲೇಡಿ ಆಫ್ ದಿ ಲೇಕ' ಎಂಬ ಕವಿತೆಯನ್ನೂ ೨೦೦೦ ಸಾಲುಗಳ ನಾಟಕವನ್ನೂ ಬರೆದರು. ಇವರ ಅನೇಕ ಕವಿತೆಗಳು ಪಾಶ್ಚಾತ್ಯರ ಮನ್ನಣೆ ಪಡೆದಿರುವವು. ೧೯೨೫ರಲ್ಲಿ ಮದ್ರಾಸ ಪ್ರಾಂತೀಯ ಪರಿಷತ್ತಿಗೆ ಅಧ್ಯಕ್ಷರಾಗಿದ್ದರು. ಇವರ ಭಾಷ

ಣಕ್ಕೆ ಮುಗ್ಧರಾಗದ ಭಾರತೀಯರೇ ಇಲ್ಲ. ೧೯೨೫ರಲ್ಲಿ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದರು. ಭಾರತವು ಸ್ವತಂತ್ರವಾದ ಬಳಿಕ ಸಂಯುಕ್ತ ಪ್ರಾಂತದ ಗವ್ಹರ್ನರರಾಗಿದ್ದರು.

ಗವ್ಹರ್ನರರಾಗಿ ಕೆಲಸ ಮಾಡುತ್ತಿದ್ದಾಗಲೇ ಹೃದಯಕ್ರಿಯೆ ನಿಂತು ೧೯೪೯ನೇ ಇಸ್ವಿಯ ಮಾರ್ಚ ತಿಂಗಳ ೨ನೇ ತಾರೀಖಿಗೆ ದೈವಾಧೀನರಾದರು. ದೇಶದ ಸೇವೆ ಸಲ್ಲಿಸುತ್ತಿರುವಾಗ ಮರಣ!

# ಸುಭಾಸಚಂದ್ರ ಭೋಸ

ಔರಂಗಜೇಬನು ಶಿವಾಜಿಯನ್ನು ಸೆರೆಮನೆಯಲ್ಲಿಡಿಸಿದನು. ರಾಜಕಾರಣ ಧುರಂಧರನಾದ ಶಿವಾಜಿಯು ಔರಂಗಜೇಬನ ಕಾವಲುಗಾರರಿಗೆ ಮಂಕುಬೂದಿ ಹಚ್ಚಿ ಆಗ್ರಾ ಸೆರೆಮನೆಯಿಂದ ಪಾರಾಗಿ ಹೋದನು ಔರಂಗಜೇಬನು ಎಷ್ಟು ಪ್ರಯತ್ನಪಟ್ಟರೂ ಶಿವಾಜಿಯು ಅವನ ಕೈವಶವಾಗಲಿಲ್ಲ. ಅಂಥ ಸಂಗತಿಯೊಂದು ಬ್ರಿಟಿಶರ ಆಳಿಕೆಯಲ್ಲಿ ನಡೆಯಿತು. ಸುಭಾಸರು ೧೯೪೦ನೇ ಇಸ್ವಿಯಲ್ಲಿಯೋ ತಮ್ಮ ಮನೆಯಲ್ಲಿಯೋ ಸರ್ಪಗಾವಲಿನಲ್ಲಿ ಇದ್ದರು. ಆದರೆ ಒಂದು ರಾತ್ರಿ ಸುಭಾಸರು ತಮ್ಮ ಮನೆಯಿಂದ ಮಾಯವಾದರು. ಬ್ರಿಟಿಶ ಸರಕಾರವು ಸುಭಾಸರನ್ನು ಹಿಡಿಯುವದಕ್ಕಾಗಿ ತನ್ನ ಶಕ್ತಿಯೆಲ್ಲವನ್ನೂ ಉಪಯೋಗಿಸಿತು. ಕುಟಿಲ ಕಾರಸ್ಥಾನಗಳನ್ನು ಯೋಜಿಸಿತು. ಆದರೆ ಸುಭಾಸರು ಅಫಗಾಣಿಸ್ತಾನದ ಮಾರ್ಗವಾಗಿ ಪ್ರಯಾಣಬೆಳೆಸಿದರು! ಜರ್ಮನಿಯಿಂದ ಬ್ರಹ್ಮದೇಶಕ್ಕೆ ಬಂದರು! ಬ್ರಹ್ಮದೇಶವು ಇಂಗ್ಲೀಷರ ಕೈಬಿಟ್ಟಿತು. ಎಲ್ಲ ರಣಭೂಮಿಗಳಲ್ಲಿಯೂ ವಿಜಯಶಾಲಿಗಳಾಗಿ ಹಿಂದಿರುಗುತ್ತಿದ್ದರು! ಸುಭಾಸರು ಬ್ರಹ್ಮದೇಶದಲ್ಲಿದ್ದ ಹಿಂದೀಯರನ್ನು ಸ್ವಾತಂತ್ರ್ಯಯುದ್ಧಕ್ಕಾಗಿ ಅಣಿಮಾಡಿದರು. ಸುಭಾಸರು ಸೇನಾಪತಿಗಳಾದರು. ಸುಭಾಸರ ಸೈನ್ಯದಲ್ಲಿ ಸೇರುವವರು ಜೀವವಿರುವ ವರೆಗೆ ಹೋರಾಡುವದಾಗಿ ಪ್ರತಿಜ್ಞಾ ಪತ್ರಕ್ಕೆ ತಮ್ಮ ರಕ್ತದಿಂದ ಸಹಿ ಮಾಡಬೇಕಾಗುತ್ತಿತ್ತು. ಹಿಂದುಸ್ತಾನದ ಸೈನ್ಯದಲ್ಲಿದ್ದ ಅನೇಕ ಸೈನಿಕರು ಸ್ಫೂರ್ತಿಗೊಂಡು ಬ್ರಿಟಿಶ

ನೌಕರಿಗೆ ಶರಣು ಹೊಡೆದು ಸುಭಾಷರ ಸೈನ್ಯದಲ್ಲಿ ಸೇರಿದರು. ಸುಭಾಷರು ಹಿಂದುಸ್ಥಾನದ ಸ್ವಾತಂತ್ರ್ಯಕ್ಕೆ ಜರ್ಮನಿ, ಜಪಾನಗಳ ಮನ್ನಣೆ ಪಡೆದರು. ಹಿಂದುಸ್ಥಾನವು ಸ್ವತಂತ್ರವಾಗುವದಕ್ಕಿಂತ ಮೊದಲೇ ಅವರು ಹಿಂದುಸ್ಥಾನ ಸರಕಾರವನ್ನು ಸ್ಥಾಪಿಸಿದರು ! ಹೆಂಗಸರೂ ಸುಭಾಷರ ಸೈನ್ಯವನ್ನು ಸೇರಿದರು !! ಸುಭಾಷರ ದೇಶಪ್ರೇಮವು ಅನುಪಮವಾದುದು. ಅವರು ದೇಶದ ಸ್ವಾತಂತ್ರ್ಯಕ್ಕಾಗಿ ಜೀವದಾಸೆಯನ್ನು ಬಿಟ್ಟು ಹೆಣಗಾಡಿದರು. ಆದರೆ ಅವರಿಗೆ ಮದ್ದು ಗುಂಡುಗಳ ಸಹಾಯವು ಸಿಗಲಿಲ್ಲ. ಅವರ ಸೈನ್ಯದ ಸಂಖ್ಯೆಯು ಕಡಿಮೆಯಾಗಿತ್ತು, ೧೯೪೫ ರಲ್ಲಿ ಬ್ರಿಟಿಷರು ವಿಜಯಿಗಳಾದರು ಸುಭಾಷರು ವಿಮಾನದಿಂದ ಜಪಾನಕ್ಕೆ ಹೋಗುತ್ತಿರುವಾಗ ವಿಮಾನಕ್ಕೆ ಬೆಂಕಿ ಹತ್ತಿ ಮರಣಹೊಂದಿದರೆಂದು ಜಪಾನ ರೇಡಿಯೋ ಸಾರಿತು.

ಸುಭಾಷರು ಕಾಲೇಜಿನಲ್ಲಿ ವಿದ್ಯಾರ್ಥಿಗಳಿರುವಾಗಲೇ ಕ್ರಾಂತಿಕಾರಿಗಳಾಗಿದ್ದರು. ಪ್ರೊಫೆಸರ ಓಟನ್ನರು ಕೆಲವು ವಿದ್ಯಾರ್ಥಿಗಳ ಅವಮಾನ ಮಾಡಿದರು. ಸುಭಾಷರಿಗೆ ಇದು ಸರಿಬರಲಿಲ್ಲ ಸುಭಾಷರು ಹುಡುಗರನ್ನು ಕಲೆಹಾಕಿ ಸಂಪು ಹೂಡಿದರು. ಇದರಿಂದ ಸುಭಾಷರಿಗೆ ಎರಡು ವರ್ಷ ಕಾಲೇಜನ್ನು ಬಿಡಬೇಕಾಯಿತು. ಆದರೆ ಅಶುತೋಷ ಮುಕರ್ಜಿಯವರ ನೆರವಿನಿಂದ ತಿರುಗಿ ಕಾಲೇಜನ್ನು ಸೇರಿದರು. ಬಿ ಎ. ಪರೀಕ್ಷೆ ಪಾಸಾಗಿ ಇಂಗ್ಲಂಡಕ್ಕೆ ತೆರಳಿದರು. ಇಂಗ್ಲಂಡದಲ್ಲಿ ಆಯ್. ಸಿ. ಎಸ್. ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಬಹುಮಾನ ಪಡೆದರು.

ಸುಭಾಷರು ಅಧಿಕಾರ ಸ್ಥಾನ ಸ್ವೀಕರಿಸದೆ ರಾಷ್ಟ್ರೀಯ ಸೇವಾದಲದ ಮುಖ್ಯಾಧಿಕಾರಿಗಳಾಗಿ ಸೆರೆಮನೆ ಸೇರಿದರು

೧೯೨೨ ರಲ್ಲಿ ಬಂಗಾಲದಲ್ಲಿ ನದಿಗಳಿಗೆ ಮಹಾಪೂರ ಬಂದಿತು. ಸುಭಾಷರು ಪೀಡಿತರಿಗೆ ಸಹಾಯ ಮಾಡುವದಕ್ಕಾಗಿ ಟೊಂಕ ಕಟ್ಟಿದರು. ಬಂಗಾಲದಲ್ಲಿ ಇವರ ಸೇವೆಯು ಜನಜನಿತವಾಗಿತ್ತು. 'ಫಾರವರ್ಡ' ಪತ್ರಿಕೆಯನ್ನು ನಡೆಯಿಸಿದರು. ಕಾಂಗ್ರೆಸ್ಸಿನ ಕೂಡ ಮತಭೇಧವಾಗಲು 'ಫಾರವರ್ಡ ಬ್ಲಾಕ' ಎಂಬ ಹೊಸ ಪಕ್ಷವನ್ನು ತೆರೆದರು. ಭಾರತದಲ್ಲಿಯ ತರುಣರೆಲ್ಲರೂ ಸುಭಾಷರ ಬೆಂಬಲಿಗರಾಗಿದ್ದರು.

ಸುಭಾಸರು ೧೯೩೮ - ೧೯೩೯ ರಲ್ಲಿ ರಾಷ್ಟ್ರೀಯ ಮಹಾಸಭೆಯ ಅಧ್ಯಕ್ಷರಾಗಿದ್ದರು.

## ಡಾ. ರಾಜೇಂದ್ರ ಪ್ರಸಾದ

ರಾಜೇಂದ್ರ ಪ್ರಸಾದರು ಸುಪ್ರಸಿದ್ಧ ವಿಧ್ವಾಂಸರು. ಅವರು ಮನಸ್ಸು ಮಾಡಿದ್ದರೆ ಗವ್ಹರ್ನರರಾಗಬಹುದಾಗಿತ್ತು ಇಲ್ಲವೆ ಹಾಯಕೋರ್ಟಿನ ನ್ಯಾಯಮೂರ್ತಿಗಳಾಗಿರಬಹುದಾಗಿತ್ತು. ಆದರೆ ದೇಶಸೇವೆಗಾಗಿ ಅದನ್ನು ತೊರೆದು ಬಡತನದ ದೀಕ್ಷೆಯನ್ನು ಕೈಕೊಂಡರು

ರಾಜೇಂದ್ರರು ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಕಲಕತ್ತಾ ವಿಶ್ವವಿದ್ಯಾನಿಲಯಕ್ಕೆ ಮೊದಲನೇ ನಂಬರು ಪಡೆದರು ವಿಶ್ವವಿದ್ಯಾನಿಲಯದಲ್ಲಿಯ ಎಲ್ಲ ಪರೀಕ್ಷೆಗಳಲ್ಲಿಯೂ ಮೊದಲನೇ ನಂಬರು ಪಡೆದರು. ಆಗ ಬ್ರಹ್ಮದೇಶ ಬಿಹಾರ ಬಂಗಾಲಗಳಿಗೆ ಒಂದೇ ವಿಶ್ವವಿದ್ಯಾನಿಲಯವಿತ್ತು. ರಾಜೇಂದ್ರ ಪ್ರಸಾದರು ವಕೀಲಿ ಪರೀಕ್ಷೆ ಪಾಸಾಗಿ ಕಲಕತ್ತೆಯ ಹಾಯಕೋರ್ಟಿನಲ್ಲಿ ವಕೀಲಿಯನ್ನು ಪ್ರಾರಂಭಿಸಿದರು. ಇವರ ಕೀರ್ತಿಯು ಸ್ವಲ್ಪ ದಿವಸಗಳಲ್ಲಿಯೇ ಎಲ್ಲಾ ಕಡೆಗೆ ಹಬ್ಬಿತು ಇವರ ಗೃತುಂಬ ಹಣ ಬರಹತ್ತಿತು ೧೯೨೦ ರಲ್ಲಿ ತಮ್ಮ ವಕೀಲಿಯನ್ನು ಬಿಟ್ಟುಕೊಟ್ಟು ದೇಶಸೇವೆಗೆ ಅಣಿಯಾದರು.

ಮಹಾತ್ಮಾ ಗಾಂಧಿಯವರು ಚಂಪಾರಣ್ಯದಲ್ಲಿ ಸತ್ಯಾಗ್ರಹ ಹೂಡಿದಾಗ ರಾಜೇಂದ್ರ ಬಾಬುಗಳು ನೆರವಾಗಿ ನಿಂತರು.

ರಾಜೇಂದ್ರ ಬಾಬುಗಳು ದೀನ ದುಃಖಿತರ ಸೇವೆಗೆ ಯಾವಾಗಲೂ ಸಿದರು. ೧೯೩೪ ರಲ್ಲಿ ಬಿಹಾರದಲ್ಲಿ ಭೂಕಂಪವಾಯಿತು. ರಾಜೇಂದ್ರ ಬಾಬುಗಳು ದೇಹದ ಪರಿವೆಯಿಲ್ಲದೆ ಬಡವರ ಸೇವೆ ಮಾಡಿದರು. ಬಡವರಗಾಗಿ ಪ್ರಾಂತದ ತುಂಬ ತಿರುಗಾಡಿ ೨೯ ಲಕ್ಷ ರೂಪಾಯಿಗಳನ್ನು ಕೂಡಿಸಿದರು.

ರಾಜೇಂದ್ರಬಾಬುಗಳಿಗೆ ಬಿಹಾರದಲ್ಲಿ ಎದುರಾಳಿಗಳಿಲ್ಲ. ಅವರು ಹೇಳಿದ್ದೆ ವೇದವಾಕ್ಯ ಕಾಂಗ್ರೆಸ್ಸಿನಲ್ಲಿ ಅವರ ಅಭಿಪ್ರಾಯಕ್ಕೆ ಬಹಳ ಮನ್ನಣೆಯಿರುವದು.

೧೯೩೯ರಲ್ಲಿ ಕಾಂಗ್ರೆಸ್ಸಿಗೂ ಸುಭಾಸರಿಗೂ ಬಡಿದಾಟವಾದಾಗ ಕಾಂಗ್ರೆಸ್ಸಿನ ಗದ್ದುಗೆಯನ್ನೇರಿ ರಾಷ್ಟ್ರವನ್ನು ಸಂಕಲ್ಪದಿಂದ ಮುಕ್ತವಾಡಿದರು.

ಗಾಂಧೀಜಿಯವರ ಶಿಷ್ಯರಲ್ಲಿ ರಾಜೇಂದ್ರಬಾಬುಗಳು ಅಗ್ರಗಣ್ಯರಾದವರು. ಮರೆ ಮೋಸಗಳನ್ನು ಅವರು ಅರಿಯರು. ಅದಕ್ಕೇ ಅವರು ಅಜಾತಶತ್ರು. ಪಕ್ಷಪಂಗಡಗಳನ್ನು ಕಟ್ಟಿ ಸ್ವಾರ್ಥ ಸಾಧಿಸುವವರಲ್ಲ. ಅಧಿಕಾರದ ಆಶೆಯೂ ಇಲ್ಲ. ಶಾಂತರೀತಿಯಿಂದ ಎದುರಾಳಿಗಳು ನುಡಿದದ್ದನ್ನು ಕೇಳಿಕೊಳ್ಳುವರು. ಅವರು ಸಿಟ್ಟಿಗೇಳುವದು ಕಡಿಮೆ ೧೯೩೪ರಲ್ಲಿ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದರು.

## ಸರ್ ಸಿ ವ್ಹಿ. ರಾಮನ್

ರಾಮನ್ನರ ಹೆಸರು ಜಗತ್ತಿನ ಸುಪ್ರಸಿದ್ಧ ಶಾಸ್ತ್ರಜ್ಞರಲ್ಲಿ ಎಣಿಸಲ್ಪಡುವದು. ಪ್ರಕಾಶ ಕಿರಣಗಳ ವಿಷಯಕ್ಕೆ ಅವರು ಮಾಡಿದ ಶೋಧಕ್ಕೆ "ರಾಮನ್ ಚಮತ್ಕಾರ" ಎನ್ನುವರು. ಪದಾರ್ಥವಿಜ್ಞಾನ ಶಾಸ್ತ್ರದಲ್ಲಿ ಜಗತ್ತಿನ ಶಾಸ್ತ್ರಜ್ಞರಿಗೆ ಮಾನ್ಯವಾದ ಅನೇಕ ಶೋಧಗಳನ್ನು ಇವರು ಮಾಡಿರುವರು. ಹೆಚ್ಚಿನ ಅಭ್ಯಾಸಕ್ಕೆ ಇಂಗ್ಲಂಡಕ್ಕೆ ಹೋಗಬೇಕೆಂದು ನಿಶ್ಚಯಿಸಿದ್ದರು. ಆದರೆ ಡಾಕ್ಟರರ ಅಭಿಪ್ರಾಯದಂತೆ ಇವರ ಶರೀರದ ಮೇಲೆ ಶೀತಹವೆಯ ಪರಿಣಾಮವಾಗುವದೆಂದು ಅವರು ಪರದೇಶದ ಪ್ರವಾಸವನ್ನು ತಡೆಹಿಡಿಯಬೇಕಾಯಿತು. ೧೯೩೦ರಲ್ಲಿ ಪದಾರ್ಥವಿಜ್ಞಾನ ಶಾಸ್ತ್ರದಲ್ಲಿ ರಾಮನ್‌ರಿಗೆ ನೋಬೆಲ್ ಬಹುಮಾನವು ದೊರೆಯಿತು.

ರಾಮನ್‌ರು ೧೨ನೇ ವರ್ಷದಲ್ಲಿಯೇ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಇವರ ತಂದೆಯವರು ತ್ರಿಚಿನಾಪಳ್ಳಿಯಲ್ಲಿ ಗಣಿತ ಮತ್ತು ಪದಾರ್ಥವಿಜ್ಞಾನ ಶಾಸ್ತ್ರದ ಶಿಕ್ಷಕರಾಗಿದ್ದರು. ೧೯೦೭ ರಲ್ಲಿ ಎಂ. ಎ. ಪರೀಕ್ಷೆಯಲ್ಲಿ ೧೮ ವರ್ಷದವರಿರುವಾಗಲೇ ಮೊದಲನೇ ತರಗತಿಯಲ್ಲಿ ಪಾಸಾದರು. ೧೯೧೭ರಿಂದ ೧೯೩೩ನೇ ಇಸ್ವಿಯ ವರೆಗೆ ಕಲಕತ್ತಾ ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾಗಿದ್ದರು. ಪ್ರಾಧ್ಯಾಪಕರಾಗಿರು

ಮಹಾತ್ಮರ ವೈಯಕ್ತಿಕ ಸತ್ಯಾಗ್ರಹದಲ್ಲಿ ದಿವಾಕರರು ಭಾಗವಹಿಸಿದ್ದರು. 'ಸಂಯುಕ್ತ ಕರ್ನಾಟಕ' ದಿನಪತ್ರಿಕೆಯ ಸಂಸ್ಥಾಪಕರಲ್ಲಿ ಒಬ್ಬರು, ೧೯೪೨ ನೇ ಸತ್ಯಾಗ್ರಹದಲ್ಲಿ ಬ್ರಿಟಿಷರಿಗೆ ಇಂಗು ಹಚ್ಚಿ ಮರೆಯಾಗಿದ್ದರು. ಮಹಾತ್ಮಾ ಗಾಂಧಿಯವರು ಮರೆಯಲ್ಲಿದ್ದವರು ಬ್ರಿಟಿಷರ ಅಧೀನರಾಗ ಬೇಕೆಂದು ಪ್ರಕಟಣೆ ಹೊರಡಿಸಿದರು. ದಿವಾಕರರು ತಾವಾಗಿಯೇ ಸರ ಕಾರದ ಅಧೀನರಾದಾಗ ಅದು ಅವರನ್ನು ಬಂಧಿಸಿತು. ಯರವಡಾ ಸೆರೆ ಮನೆಯಲ್ಲಿದ್ದಾಗ ಪಾಂಡಿತ್ಯಪೂರ್ಣವಾದ "ವಚನಶಾಸ್ತ್ರ ರಹಸ್ಯ" ಎಂಬ ಅಮೂಲ್ಯವಾದ ಗ್ರಂಥವನ್ನು ಬರೆದರು. 'ಶ್ರೀ ರಾಮಕೃಷ್ಣ ಚರಿತಾಮೃತ' ಗ್ರಂಥವನ್ನು ಬರೆದಿರುವರು ಗೀತೆಯ ಗುಟ್ಟನ್ನು ತಿಳಿಸಿದರು. ಬಳ್ಳಾರಿ ಯಲ್ಲಿ ನೆರೆದ ಸಾಹಿತ್ಯ ಸಮ್ಮೇಲನದ ಅಧ್ಯಕ್ಷರಾಗಿದ್ದರು. 'ಅಂತರಾತ್ಮನಿಗೆ' ಎಂಬುದು ಕಾವ್ಯಮಯವಾದ ಶೈಲಿಯಲ್ಲಿ ಬರೆಯಲ್ಪಟ್ಟ ದಿವಾಕರರ ಜೀವನ ಚಿತ್ರ 'ಸೆರೆಯ ಮರೆಯಲ್ಲಿ' ಎಂಬ ಪುಸ್ತಕದಲ್ಲಿ ಜೇಲಿನ ಅನು ಭವಗಳನ್ನು ನಿರೂಪಿಸಿರುವರು. 'ಸತ್ಯಾಗ್ರಹ' ಎಂಬದರಲ್ಲಿ ಸತ್ಯಾಗ್ರಹದ ವಿವರಣೆ ಇದೆ.

ದಿವಾಕರರು ಕೇಂದ್ರದಲ್ಲಿ ಸುದ್ದಿ ಮತ್ತಿ ಆಕಾಶವಾಣಿ ಮಂತ್ರಿ ಗಳಾಗಿರುವರು.

## ಡಾ. ಹರ್ಡೀಕರ

ಡಾ. ಹರ್ಡೀಕರರು ಭಾರತದ ಸೇನಾನಿಗಳೆಂದು ಹೆಸರಾಗಿರುವರು. ಕಾಂಗ್ರೆಸ ಸೇವಾದಲದ ಸಂಸ್ಥಾಪಕರು. ಕಾಂಗ್ರೆಸ್ಸಿನಲ್ಲಿ ಶಿಸ್ತು ಮತ್ತು ಪ್ರೇಮಬೆಳೆಯಬೇಕು, ತರುಣರಲ್ಲಿ ಸ್ವಾತಂತ್ರ್ಯ ಮತ್ತು ಸ್ವಾರ್ಥತ್ಯಾಗಗಳು ನೆಲೆಯೂರಬೇಕೆಂದು ಸೇವಾದಲವನ್ನು ತೆಗೆದರು. ಇಂದು ಸೇವಾದಲದ ಸ್ವಯಂಸೇವಕರು ಭರತಖಂಡದ ತುಂಬ ಇರುವರು. ಡಾ. ಹರ್ಡೀಕರರು ಎಂದೂ ಅಧಿಕಾರ ಲಾಲಸೆ ಮಾಡಿದವರಲ್ಲ ಪಕ್ಷಪಂಗಡಗಳ ರಾಜಕಾರಣವು ಅವರಿಗೆ ಸೇರುವದಿಲ್ಲ. ಕೆಲಸ ಮಾಡುವದೊಂದೇ ಅವರಿಗೆ ಗೊತ್ತಿರುವದು. ಗೀತೆಯಲ್ಲಿ ಶ್ರೀಕೃಷ್ಣನು ಹೇಳಿದಂತೆ ಫಲಾಪೇಕ್ಷೆಯಿಲ್ಲದೆ

ಅವರು ಕೆಲಸ ಮಾಡಿರುವರು. ದೇಶಸೇವೆಯಲ್ಲಿ ಮದಿವೆಮಾಡಿಕೊಳ್ಳ ಲಿಕ್ಕೂ ಅವರಿಗೆ ವೇಳೆ ದೊರೆಯಲಿಲ್ಲ! ಅವರು ಕಾಂಗ್ರೆಸ್ಸಿನ ಸೈನಿಕರು. ಅವರು ಅಮೇರಿಕೆಗೆ ಹೋಗಿ ಬಹಳ ಕಷ್ಟಪಟ್ಟು ಸಾಲೆ ಕಲಿತರು. ಲಾಲಾ ಲಜಪತರಾಯರ ಸಹವಾಸವು ಇವರಿಗೆ ಲಭಿಸಿತು. ಅಂದಿನಿಂದಲೇ ಡಾ. ಹರ್ಡೀಕರರು ದೇಶಸೇವೆಗೆ ಅಣಿಯಾದರು. ಲಾಲಾ ಲಜಪತರಾಯರ ಆಶೀರ್ವಾದ ಪಡೆದು ಹಿಂದುಸ್ತಾನಕ್ಕೆ ಮರಳಿ ಬಂದರು. ಅಂದಿನಿಂದ ದೇಶದ ಸೇವೆಯಲ್ಲಿ ನಿರತರಾಗಿರುವರು. ಇವರ ಜೀವನವು ಸಾಹಸಮಯ ಸಂಗತಿಗಳಿಂದ ತುಂಬಿರುವದು. ವಿಶ್ರಾಂತಿಯೆಂಬದನ್ನು ಇವರು ಅರಿಯರು.

## ಕೆ. ಎಮ್. ಮುನ್ಶಿ

ಭಾರತೀಯ ರಾಜಕೀಯ ರಂಗದಲ್ಲಿ ಮುನ್ಶಿಯವರ ಹೆಸರು ಚಿರ ಸ್ಥಾಯಿಯಾದುದು. ಮುನ್ಶಿಯವರು ರಾಜಕೀಯ ರಂಗದಲ್ಲಿಯೂ, ಸಾಹಿತ್ಯದಲ್ಲಿಯೂ, ಸಮಾಜ ಸುಧಾರಣೆಯಲ್ಲಿಯೂ, ಶಿಕ್ಷಣ ಸುಧಾರಣೆ ಯಲ್ಲಿಯೂ ತಮ್ಮ ಪ್ರತಿಭಾ ಶಕ್ತಿಯನ್ನು ತೋರಿಸಿದ್ದಾರೆ. ಗುಜರಾಥದ ಸಾಂಸ್ಕೃತಿಕ ಏಳ್ಗೆಗೆ ಮುನ್ಶಿಯವರೇ ಕಾರಣರು. ಅವರು ಸಹಾಯ ಮಾಡದ ಶಿಕ್ಷಣ ಸಂಸ್ಥೆಯಿಲ್ಲ. ಅವರ ಸಲಹೆ ಕೇಳದ ಸಂಸ್ಥೆಯೂ ಗುಜ ರಾಥದಲ್ಲಿ ದೊರೆಯಲಾರದು. ಭಾರತೀಯ ಘಟನಾ ಸಮಿತಿಯ ಸಭಾಸ ದರಲ್ಲಿ ಅವರು ಒಬ್ಬರಾಗಿರುವರು.

ಹಿಂದುಸ್ತಾನಕ್ಕೂ ಹೈದರಾಬಾದಕ್ಕೂ ತಂಟೆ ಉದ್ಭವಿಸಿದಾಗ ಮುನ್ಶಿಯವರು ಹೈದರಾಬಾದದಲ್ಲಿದ್ದರು. ಹೈದರಾಬಾದದಲ್ಲ ಹಿಂದೀ ಸೈನ್ಯವು ಕಾಲಿಡುವದಕ್ಕಿಂತ ಮೊದಲು ಅವರ ಮಿತ್ರರು ಯಾವದೊಂದು ಸುರಕ್ಷಿತ ಸ್ಥಳಕ್ಕೆ ಹೋಗಲು ಬಿನ್ನವಿಸಿದರು. ಆದರೆ ಮುನ್ಶಿಯವರು ಹೈದರಾಬಾದವನ್ನು ಬಿಟ್ಟು ಕದಲದೆ ಗಂಡಾಂತರ ಪ್ರಸಂಗದಲ್ಲಿಯೂ ಅಲ್ಲಿಯೇ ನಿಂತರು.

ಗುಜರಾಥೀ ಭಾಷೆಯಲ್ಲಿ ಮುನ್ಶಿಯವರು ಕಾದಂಬರಿಗಳನ್ನು ಬರೆದು ಮಾದರಿಯ ಗದ್ಯವನ್ನು ಬಳಕೆಯಲ್ಲಿ ತಂದರು. ಅವರ ಗದ್ಯವು ಗುಜರಾಥಿಯ ಸಾಹಿತಿಗಳಿಗೆ ಆದರ್ಶವಾಗಿದೆಯೆಂದು ಗುಜರಾಥಿ ಭಾಷೆ ಬಲ್ಲವರು ಹೇಳುವರು. ನಾಟಕಗಳನ್ನೂ ವಿಮರ್ಶಾ ಗ್ರಂಥಗಳನ್ನೂ ಬರೆದು ಗುಜರಾಥೀ ಸಾಹಿತ್ಯಕ್ಕೆ ಕಳೆ ಕಟ್ಟಿದ್ದಾರೆ. ಮುನ್ಶಿಯವರು ಬರೆಯದ ವಿಷಯವಿಲ್ಲ ಸಾಹಿತ್ಯದ ವಿಷಯಕ್ಕೆ ಬರೆದಿದ್ದಾರೆ ರಾಜಕಾರಣವಂತೂ ಅವರ ವಿಷಯವೇ. ಸಂಸ್ಕೃತಿ, ವಿಮರ್ಶೆ ಮುಂತಾದವುಗಳು ಅವರ ಪಾಂಡಿತ್ಯದ ಮತ್ತು ಸಂಶೋಧನ ಬುದ್ಧಿಯ ಕುರುಹುಗಳಾಗಿರುವವು.

ಭಾರತೀಯರಲ್ಲಿ ಅವರಷ್ಟು ಪ್ರತಿಭಾವಂತ ಕಾಯಿದೆ ಪಂಡಿತರು ಎಷ್ಟು ಜನ ದೊರೆಯುವರು? ಮುಂಬಯಿ ಹಾಯಕೋರ್ಟಿನಲ್ಲಿ ಅವರ ಎದುರುವಾದಿಸುವ ಧೈರ್ಯಶಾಲಿಯು ಮತ್ತೊಬ್ಬನಿಲ್ಲ. ಅವರು ಹಾಯಕೋರ್ಟಿನಲ್ಲಿ ವಕೀಲಿ ನಡಿಸುವಾಗ ರೊಕ್ಕದ ಮಳೆಯಾಗುತ್ತಿತ್ತು. ಆದರೆ ಮುನ್ಶಿಯವರು ಹಣ ಗಳಿಸುವದರಲ್ಲಿಯೇ ತಮ್ಮ ವೇಳೆಯನ್ನು ಕಳೆಯದೆ ಸಾರ್ವಜನಿಕ ಕಾರ್ಯಕ್ಕಾಗಿ ತನ್ನ ವೇಳೆಯನ್ನು ಮೀಸಲಾಗಿಟ್ಟರು. ಗುಜರಾಥದ ಪ್ರತಿಯೊಂದು ಸಾರ್ವಜನಿಕ ಸಂಸ್ಥೆಯು ಮುನ್ಶಿಯವರಿಗೆ ಋಣಿಯಾಗಬೇಕಾಗಿದೆ.

ಮುನ್ಶಿಯವರು ೧೮೮೭ರಲ್ಲಿ ಬಡೋಚದಲ್ಲಿ ಜನ್ಮಿಸಿದರು. ಬಿ. ಎ., ಮತ್ತು ಎಲ್‌ಎಲ್. ಬಿ ಡಿಗ್ರಿಯನ್ನು ಪಡೆದು ಮುಂಬಯಿ ಹಾಯಕೋರ್ಟಿನಲ್ಲಿ ವಕೀಲಿಯನ್ನು ಪ್ರಾರಂಭಿಸಿದರು. ಇವರು ಅಪೂರ್ವ ಬುದ್ಧಿ ಮತ್ತೆಯಿಂದಲೂ ಪ್ರತಿಭಾ ಶಕ್ತಿಯಿಂದಲೂ ವಕೀಲಿ ವ್ಯವಸಾಯದಲ್ಲಿ ಬಹು ಬೇಗನೆ ಕೀರ್ತಿಶಾಲಿಗಳಾದರು.

೧೯೧೫ರಲ್ಲಿ 'ಯಂಗ ಇಂಡಿಯಾ' ವೃತ್ತಪತ್ರಿಕೆಯ ಸಂಪಾದಕರಲ್ಲಿ ಒಬ್ಬರಾಗಿದ್ದರು. ಇವರ ಇಂಗ್ಲೀಷ ಬರೆಹಗಳು ಸರಳವಾದ ಇಂಗ್ಲೀಷದಲ್ಲಿ ಬಹಳ ಮಹತ್ವದ ವಿಷಯಗಳನ್ನು ತಿಳಿಸುತ್ತಿದ್ದುದರಿಂದ ಬೇಗನೆ ಲೋಕಪ್ರಿಯವಾದವು.

೧೯೧೯ರಲ್ಲಿ ಇವರು ಮುಂಬಯಿ ಪ್ರಾಂತದ 'ಹೋಮರೂಲಲೀಗ'ದ ಕಾರ್ಯದರ್ಶಿಗಳಾಗಿದ್ದರು. ಇವರ ಸಂಘಟನಾ ಚಾತುರ್ಯವು ಆಗಲೇ ಕಂಡು ಬಂದಿತು.

೧೯೨೫ರಲ್ಲಿ ಮುಂಬಯಿ ವಿಶ್ವವಿದ್ಯಾಲಯದ ಸಿನೇಟಿಗೆ ಸದಸ್ಯರಾಗಿ ಆರಿಸಿ ಬಂದರು. ಗುಜರಾಥೀ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಸ್ಥಾನದ ಮಾನವೂ ಇವರಿಗೆ ದೊರೆತಿತ್ತು.

ಬಡೋದಾ ವಿಶ್ವವಿದ್ಯಾನಿಲಯದಲ್ಲಿಯೂ, ಮುಂಬಯಿ ವಿಶ್ವವಿದ್ಯಾನಿಲಯದಲ್ಲಿಯೂ ಅವರು ಅಮೋಘವಾದ ಕಾರ್ಯವನ್ನು ಮಾಡಿರುವರು. ಪ್ರಾಥಮಿಕ ಶಾಲೆಗಳಲ್ಲಿ ಆಟಗಳಿಗೂ ಮಹತ್ವ ದೊರೆಯುವಂತೆ ಮಾಡಿದರು.

೧೯೩೦ರ ಸತ್ಯಾಗ್ರಹದಲ್ಲಿಯೂ ಭಾಗವಹಿಸಿದ್ದರು. ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದಕ್ಕಾಗಿ ೬ ತಿಂಗಳ ಕಠಿಣ ಶಿಕ್ಷೆ ಅನುಭವಿಸಬೇಕಾಯಿತು. ಕಾಂಗ್ರೆಸ್ಸಿನಲ್ಲಿ ಇವರ ಅಭಿಪ್ರಾಯಕ್ಕೆ ಬಹಳ ಮನ್ನಣೆ ಇರುವದು.

೧೯೩೭ರಲ್ಲಿ ಮುಂಬಯಿ ಶಾಸನ ಸಭೆಗೆ ಆರಿಸಿಬಂದರು ಮೊದಲನೇ ಕಾಂಗ್ರೆಸ ಮಂತ್ರಿಮಂಡಲದಲ್ಲಿ ನ್ಯಾಯಾಂಗ ಸಚಿವರಾಗಿದ್ದರು.

ಹೈದರಾಬಾದದಲ್ಲಿ ಅವರು ಹಿಂದುಸ್ಥಾನದ ಎಜೆಂಟ ಜನರಲ್‌ರಾಗಿ ಮಾಡಿದ ಕೆಲಸವನ್ನು ಮರೆಯುವದೆಂತು ?

## ಕಮಲಾದೇವಿ ಚಟ್ಟೋಪಾಧ್ಯಾಯ

ಕರ್ನಾಟಕದ ಕೀರ್ತಿಯನ್ನು ಹೊರನಾಡುಗಳಲ್ಲಿ ಹಬ್ಬಿಸಿದವರಲ್ಲಿ ಕಮಲಾದೇವಿಯವರು ಅಗ್ರಗಣ್ಯರು. ಇವರು ತಮ್ಮ ಆಕರ್ಷಕವಾದ ವ್ಯಕ್ತಿತ್ವದಿಂದಲೂ ಮಾತುಗಾರಿಕೆಯಿಂದಲೂ ಬೇಗನೆ ಸಭಿಕರನ್ನು ಗೆದೆಯಬಲ್ಲರು. ಇಂಗ್ಲೀಷಿನಲ್ಲಿ ಇವರ ವಾಗ್ಮಿತ್ವಕ್ಕೆ ಬೆರಗಾಗದವರಿಲ್ಲ. ಸಮಾಜವಾದೀ ಪಕ್ಷದ ಮುಖಂಡರಲ್ಲಿ ಒಬ್ಬರಾಗಿರುವರು. ಭಾರತಕ್ಕೆ ಸ್ವಾತಂತ್ರ್ಯ ಬಂದರೆ ತೀರದು, ನಮಗೆ ಜನತಾರಾಜ್ಯ ರೈತ ಕೂಲಿಕಾರ

ವಾಗ ಆಟದಲ್ಲಿ ವೇಳೆ ಕಳೆಯದೆ ಪ್ರಯೋಗದಲ್ಲಿ ಮನಸ್ಸು ಹಾಕುತ್ತಿದ್ದರು. ಈಗ ಬೆಂಗಳೂರಿನಲ್ಲಿ ಸಂಶೋಧನ ವಿಭಾಗದಲ್ಲಿ ಕೆಲಸ ಮಾಡುತ್ತಿರುವರು. ಪರದೇಶಗಳಿಗೆ ಹೋಗಿ ಉಪನ್ಯಾಸಗಳನ್ನು ಕೊಟ್ಟು ತಮ್ಮ ಸಂಶೋಧನಗಳಿಗೆ ಅವರ ಮನ್ನಣೆಯನ್ನು ಪಡೆದಿರುವರು. ೧೯೩೩ರಿಂದ ಹಿಂದೀ ವಿಜ್ಞಾನ ಸಂಸ್ಥೆಯ ಮುಖ್ಯಾಧಿಕಾರಿಗಳಾಗಿರುವರು. ರಾಮನ್‌ರು ಇನ್ನೂ ಸಂಶೋಧನೆಯಲ್ಲಿಯೇ ಮಗ್ನರಾಗಿರುವರು.

## ಪಂಡಿತ ಜವಾಹರಲಾಲ ನೆಹರು

ಗಾಂಧೀಜಿಯವರನ್ನು ಬಿಟ್ಟರೆ ನೆಹರೂರವರಷ್ಟು ಲೋಕಪ್ರಿಯರಾದವರು ಭಾರತದೇಶದಲ್ಲಿ ಮತ್ತೆ ಯಾರೂ ಇಲ್ಲ. ನೆಹರು ಎಂದರೆ ಎಲ್ಲ ಜನರು ತಮ್ಮ ಬಡಿದಾಟಗಳನ್ನು ಬಿಟ್ಟು ಒಕ್ಕಟ್ಟು ಆಗುವರು. ಅವರು ಎಲ್ಲಿಗೆ ಹೋಗುವರೋ ಅಲ್ಲಿ ಜನರು ಲಕ್ಷಗಟ್ಟಲೆಯಾಗಿ ನೆರೆಯುವರು. ಪಂಡಿತ ನೆಹರುಗಳು ಭಾರತದ ಕೀರ್ತಿಯನ್ನು ಎಲ್ಲ ದೇಶಗಳಲ್ಲಿಯೂ ಹಬ್ಬಿಸುತ್ತಿರುವರು. ಅವರಿಂದ ಭಾರತವು ಭರದಿಂದ ಮುಂದುವರಿಯುತ್ತಿರುವದು. ಜಗತ್ತಿನ ಮೂಲೆ ಮೂಲೆಗಳಲ್ಲಿಯೂ ಅವರ ಆತ್ಮ ಚರಿತ್ರವು ಓದಲ್ಪಡುವದು. ಯುರೋಪದ ಎಲ್ಲ ಭಾಷೆಗಳಲ್ಲಿಯೂ ಅವರ ಆತ್ಮ ಚರಿತ್ರವು ಭಾಷಾಂತರಿಸಲ್ಪಟ್ಟಿರುವದು

ನೆಹರೂರವರ ಜೀವನವು ಸಾಹಸಮಯ ವೃತ್ತಾಂತಗಳಿಂದ ತುಂಬಿರುವದು. ಅವರ ತಂದೆಯವರಾದ ಮೋತಿಲಾಲ ನೆಹರುಗಳು ಅಲಹಾಬಾದ ಹೈಕೋರ್ಟಿನ ವಕೀಲರಾಗಿದ್ದರು. ಅವರ ಪ್ರಾಪ್ತಿಯು ಲಕ್ಷಾಂತರ ರೂಪಾಯಿಗಳನ್ನು ಮೀರಿತ್ತು. ಅವರು ವಕೀಲಿ ಮಾಡಲು ಎದ್ದರೆ ಸಿಂಹವು ಗರ್ಜಿಸಿದಂತಾಗುತ್ತಿತ್ತು. ಅವರಿಗೆ ಇಂಗ್ಲೀಷ ಸಂಸ್ಕೃತಿಯ ಹುಚ್ಚು ಬಹಳ. ತಮ್ಮ ಮಕ್ಕಳೆಲ್ಲರೂ ಆಂಗ್ಲ ಸಂಸ್ಕೃತಿಯ ಪ್ರತೀಕವಾಗಬೇಕೆಂದು ಅವರು ಇಚ್ಛಿಸುತ್ತಿದ್ದರು. ನೆಹರೂರವರಿಗೆ ಮನೆಯಲ್ಲಿಯೇ ಇಂಗ್ಲೀಷ ಶಿಕ್ಷಣ ದೊರೆಯಿತು.

೧೯೦೫ರಲ್ಲಿ ನೆಹರುರವರು ಹ್ಯಾರೋ ವಿಶ್ವವಿದ್ಯಾಲಯಕ್ಕೆ ಹೋದರು. ಅಲ್ಲಿ ಪ್ರವೇಶ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಕೆಂಬ್ರಿಜ ವಿಶ್ವವಿದ್ಯಾಲಯವನ್ನು ಸೇರಿ ೧೯೧೦ರಲ್ಲಿ ಬಿ. ಎ. ಪದವಿಯನ್ನು ಪಡೆದರು. ೧೯೧೨ರಲ್ಲಿ ಬ್ಯಾರಿಸ್ಟರರಾದರು. ಆದರೆ ನೆಹರುರವರು ವಕೀಲಿ ಉದ್ಯೋಗ ಮಾಡಲಿಲ್ಲ. ೧೯೧೪ರಲ್ಲಿ ಆಫ್ರಿಕೆಯಲ್ಲಿರುವ ಬಡ ಹಿಂದೀಯರ ನೆರವಿಗಾಗಿ ೫೦ ಸಾವಿರ ರೂಪಾಯಿಗಳನ್ನು ಕೂಡಿಸಿಕೊಟ್ಟರು.

೧೯೨೭ರಲ್ಲಿ ಸಾಮ್ರಾಜ್ಯ ವಿರೋಧಿ ಸಮ್ಮೇಳನಕ್ಕಾಗಿ ಬ್ರುಸಲ್ಸಿಕ್ಕೆ ಹೋದರು. ಐವರು ಅಧ್ಯಕ್ಷರಲ್ಲಿ ಇವರೊಬ್ಬರಾಗಿದ್ದರು. ಆ ಸಮ್ಮೇಳನಕ್ಕೆ ಆಧ್ಯಕ್ಷರಾದವರಲ್ಲಿ ಐನಸ್ಟೈನ, ರೊಮಾರೊಲಾ ಮುಂತಾದ ಜಗತ್ಪ್ರಸಿದ್ಧ ಮಹನೀಯರಿದ್ದರು. ನೆಹರುರವರು ಯಾವದೇ ತರದ ಸಾಮ್ರಾಜ್ಯವಾದವನ್ನು ಸಹಿಸುವವರಲ್ಲ. ದಿಲ್ಲಿಯಲ್ಲಿ ಡಚ್ಚರ ಸಾಮ್ರಾಜ್ಯವಾದವನ್ನು ನಿಷೇಧಿಸಲು ಸಭೆ ಕರೆದಿದ್ದರು. ಏಶಿಯಾದಲ್ಲಿ ಯಾವದೇ ರೀತಿಯ ಸಾಮ್ರಾಜ್ಯವಾದವನ್ನು ಸಹಿಸುವದಿಲ್ಲವೆಂದು ಹೇಳಿದರು.

೧೯೨೭ರಲ್ಲಿ ಸಂಪೂರ್ಣ ಸ್ವಾತಂತ್ರ್ಯವೇ ಹಿಂದುಸ್ಥಾನದ ಧ್ಯೇಯವೆಂದು ಸಾರಿದರು ನೆಹರುಗಳು ಸ್ವತಂತ್ರ ಹಿಂದುಸ್ಥಾನದ ಮೊದಲನೇ ಮುಖ್ಯ ಮಂತ್ರಿಗಳಾಗಿರುವರು.

೧೯೨೮ರಲ್ಲಿ ಸ್ವಾತಂತ್ರ ಸಂಘವನ್ನು ಸ್ಥಾಪಿಸಿದರು. ಸಾಯಮನ್ ಕಮೀಶನ್ ಬಂದಾಗ ಅದನ್ನು ಬಹಿಷ್ಕರಿಸಿದರು. ಲಾಠಿಯ ಏಟಿನ ರುಚಿ ನೋಡಿದರು ! ಜೈಲುವಾಸವಂತೂ ನೆಹರೂರವರ ಜೀವನದಲ್ಲಿ ಮೇಲಿಂದ ಮೇಲೆ ಬರುತ್ತದೆ.

ನೆಹರುರವರು ಎಲ್ಲಿ ಹೋದರೂ ತಮ್ಮ ಪ್ರಭಾವವನ್ನು ಬೀರಬಲ್ಲರು. ಪ್ಯಾರಿಸ ಪಟ್ಟಣದಲ್ಲಿ ಕೂಡಿದ ಸಂಯುಕ್ತ ರಾಷ್ಟ್ರ ಸಭೆಯಲ್ಲಿ ಮಾತಾಡಿ ಹಿಂದುಸ್ಥಾನದ ಧೋರಣವನ್ನು ಸ್ಪಷ್ಟಪಡಿಸಿದರು. ಪರಕೀಯರಲ್ಲಿ ಹಿಂದುಸ್ಥಾನದ ಬಗ್ಗೆ ಇದ್ದ ತಪ್ಪು ತಿಳುವಳಿಕೆಗಳು ಇವರಿಂದದೂರಾದವು.

ದೃಢನಿಶ್ಚಯವು ಇವರ ಸ್ವಭಾವದಲ್ಲಿ ಎದ್ದು ಕಾಣುವದು. ಕಾಶ್ಮೀರದಲ್ಲಿ ಕಾಲಿಡಲು ಕಾಶ್ಮೀರ ಸಂಸ್ಥಾನವು ಅವರಿಗೆ ನಿರ್ಬಂಧ ಹಾಕಿತು.

‘ ನಾನು ಶ್ರೀನಗರವನ್ನು ಮುಟ್ಟಿಯೇ ತೀರುವೆನು ’ ಎಂದರು. ಸಂಸ್ಥಾನೀ ಸೈನಿಕರು ಅಡ್ಡಿ ಮಾಡಿದರೂ ಕೇಳದೆ ನೆಹರುಗಳು ಮುನ್ನುಗ್ಗಿದರು. ಯಾವ ಸೈನ್ಯಕ್ಕೂ ಅವರು ಹೆದರುವವರಲ್ಲ ಮುಂದಿಟ್ಟ ಹೆಜ್ಜೆ ಹಿಂದೆ ಇಡುವದು ಅವರಿಗೆ ಗೊತ್ತಿಲ್ಲ. ಕಾಶ್ಮೀರ ಸರಕಾರವು ಗಾಬರಿಯಾಗಿ ಅವರನ್ನು ಸೆರೆ ಹಿಡಿಯಿತು. ಆದರೆ ನೆಹರುರವರ ಸ್ವಾತಂತ್ರ್ಯಕ್ಕೆ ತಡೆ ಹಾಕುವವರಾರು? ಕಾಶ್ಮೀರಿಗಳಿಗೆ ಸ್ವಾತಂತ್ರ್ಯ ಯುದ್ಧದಲ್ಲಿ ನೆರವಾದರು. ಪ್ರಜಾಸತ್ತಾತ್ಮಕ ರಾಜ್ಯವನ್ನು ಸ್ಥಾಪಿಸಿದರು. ಪಾಕಿಸ್ತಾನಿಗಳು ಕಾಶ್ಮೀರದ ಮೇಲೆ ದಂಡೆತ್ತಿಬಂದರು ಕಾಶ್ಮೀರಕ್ಕೆ ಗಂಡಾಂತರ ಪರಿಸ್ಥಿತಿ ಪ್ರಾಪ್ತವಾಯಿತು. ನೆಹರುಗಳು ಕಾಶ್ಮೀರವನ್ನು ಉಳಿಸುವದಕ್ಕಾಗಿ ಹಿಂದೀ ಸೈನ್ಯ ಕಳಿಸಿದರು. ದಬ್ಬಾಳಿಕೆಯು ಎಲ್ಲಿ ನಡೆದರೂ ಅವರು ಅದನ್ನು ಸಹಿಸಲಾರರು.

ನೇತಾಜಿ ಸುಭಾಸ ಸೈನಿಕರ ವಿಚಾರಣೆ ನಡೆದಾಗ ವಕೀಲಿ ಡ್ರೆಸ್ಸನ್ನು ಹಾಕಿಕೊಂಡು ಕೋರ್ಟಿಗೆ ಹೋದರು ! ಸುಭಾಸ ಸೈನಿಕರು ನಿರಪರಾಧಿಗಳೆಂದು ಸಾರಿದರು.

ಮಹಾತ್ಮಾ ಗಾಂಧಿಯವರು ನೆಹರುರವರೇ ತಮ್ಮ ಉತ್ತರಾಧಿಕಾರಿಗಳೆಂದು ಸಾರಿದ್ದರು. ಮಹಾತ್ಮರ ಮಾರ್ಗದಲ್ಲಿಯೆ ಮುನ್ನಡೆಯಲು ಅವರು ಪಣ ತೊಟ್ಟಿರುವರು. ಬ್ರಿಟನ್ನದ ಕೂಡ ಮಿತ್ರಭಾವದಿಂದ ಇರುವದಾಗಿ ಅವರು ಸಾರಿರುವರು. ಅವರು ಕುನಸಿಟ್ಟು ಸೇಡು ತೀರಿಸಿಕೊಳ್ಳುವವರಲ್ಲ. ಭಾರತಕ್ಕೆ ಅಂತರರಾಷ್ಟ್ರೀಯ ಖ್ಯಾತಿಯನ್ನು ತಂದು ಕೊಟ್ಟವರು ನೆಹರುಗಳೇ. ಅವರು ಅಂತರರಾಷ್ಟ್ರೀಯ ರಾಜಕಾರಣದ ಅಭ್ಯಾಸ ಮಾಡಿರುವದರಿಂದ ವಿಶಾಲ ದೃಷ್ಟಿಯಿಂದ ಎಲ್ಲ ದೇಶಗಳ ಕಡೆಗೂ ನೋಡಬಲ್ಲರು.

ಎರಡನೆ ಮಹಾಯುದ್ಧವು ಮುಗಿದರೂ ಜಗತ್ತಿನಲ್ಲಿ ಶಾಂತಿಯ ಲಕ್ಷಣಗಳು ಕಾಣಲೊಲ್ಲವು. ರಶಿಯವು ಒಂದು ಕಡೆ ಅಮೇರಿಕೆಯು ಮತ್ತೊಂದು ಕಡೆಯಾಗಿರುವವು. ಜಗತ್ತಿನಲ್ಲಿ ಎರಡು ಪಂಗಡಗಳಾಗಿರುವವು. ಹಿಂದುಸ್ತಾನವು ಯಾವದೇ ಪಂಗಡದಲ್ಲಿ ಸೇರದೆ ಜಗತ್ತಿನ ಶಾಂತಿಗಾಗಿ ದುಡಿಯುವದೆಂದು ನೆಹರುಗಳು ಸಾರಿರುವರು. ಜಗತ್ತಿನಲ್ಲಿ ಶಾಂತಿ

ಸ್ಥಾಪಿಸುವದೇ ಅವರ ಗುರಿಯಾಗಿರುವದು. ದೀನ ದಲಿತರ ಉದ್ಧಾರಕ್ಕಾಗಿ ದುಡಿಯುವೆವೆಂದು ಸಾರಿ ಹೇಳಿರುವರು.

ಜಗತ್ತಿನಲ್ಲಿಯ ಮುಖಂಡರೆಲ್ಲರೂ ನೆಹರೂರವರ ಕಡೆಗೆ ಆಶಾದೃಷ್ಟಿಯಿಂದ ನೋಡುತ್ತಿರುವರು. ಅವರ ಮುಖಂಡತ್ವದಲ್ಲಿ ಭರತಖಂಡವು ವೃದ್ಧಿಯನ್ನು ಹೊಂದುವದರಲ್ಲಿ ಸಂದೇಹವಿಲ್ಲ.

## ವಿಜಯಲಕ್ಷ್ಮಿ ಪಂಡಿತ

ಭಾರತೀಯ ಮಹಿಳೆಯು ಪರದೇಶದಲ್ಲಿ ರಾಯಭಾರಿಯಾದದ್ದು ಇದೇ ಮೊದಲನೆ ಸಲ. ಈ ಮಾನವು ವಿಜಯಲಕ್ಷ್ಮಿ ಪಂಡಿತರಿಗೆ ದೊರೆತಿರುವದು. ವಿಜಯಲಕ್ಷ್ಮಿ ಪಂಡಿತರು ರಶಿಯದಲ್ಲಿ ರಾಯಭಾರಿಗಳಾಗಿದ್ದರು. ಈಗ ಸಂಯುಕ್ತ ಸಂಸ್ಥಾನದಲ್ಲಿ ರಾಯಭಾರಿಗಳಾಗಿ ನಿಯೋಜಿತರಾಗಿರುವರು. ಸಂಯುಕ್ತರಾಷ್ಟ್ರ ಸಭೆಯಲ್ಲಿ ಹಿಂದುಸ್ಥಾನದ ಪ್ರತಿನಿಧಿಯಾಗಿ ಹೋಗಿ ದಕ್ಷಿಣ ಆಫ್ರಿಕೆಯಲ್ಲಿ ನಡೆಯುತ್ತಿರುವ ಅನ್ಯಾಯಗಳನ್ನು ತಮ್ಮ ಸ್ಪಷ್ಟವಾದ ವಾಣಿಯಿಂದ ಖಂಡಿಸಿದರು. ೧೯೪೯ರಲ್ಲಿ ಅಮೇರಿಕೆಯ ಪ್ರವಾಸವನ್ನು ಕೈಕೊಂಡಿದ್ದರು. ಆ ಕಾಲದಲ್ಲಿ ಹಿಂದುಸ್ಥಾನದ ನಿಜ ಸಂಗತಿಯನ್ನು ಅಮೇರಿಕನ್ನರಿಗೆ ತಿಳಿಸಿದರು.

## ರಂಗನಾಥ ದಿವಾಕರ

ದಿವಾಕರರು ಕರ್ನಾಟಕದ ಕರ್ಮಯೋಗಿಗಳು. ಇವರು ಸಾಹಿತಿಗಳೂ, ಸಮಾಜ ಸುಧಾರಕರೂ, ಗಾಂಧೀ ಭಕ್ತರೂ, ದೇಶ ಭಕ್ತರೂ, ಎಂದು ಹೆಸರಾಗಿರುವರು. ರಾಜಾರಾಮ ಕಾಲೇಜಿನಲ್ಲಿ ಇಂಗ್ಲೀಷ ಪ್ರಾಧ್ಯಾಪಕರಾಗಿದ್ದರು. ಕರ್ನಾಟಕದಲ್ಲಿ ಕ್ರಾಂತಿಯನ್ನು ಮಾಡುವದಕ್ಕಾಗಿ 'ಕರ್ಮವೀರ' ವೃತ್ತಪತ್ರಿಕೆಯನ್ನು ಹೊರಡಿಸಿದರು. ಈ ಹೊತ್ತು 'ಕರ್ಮವೀರ'ವು ಅತ್ಯಂತ ಲೋಕಪ್ರಿಯ ವಾರ ಪತ್ರಿಕೆಗಳಲ್ಲಿ ಒಂದಾಗಿರುವದು.

ರಾಜ್ಯ ಬೇಕು ಎಂದು ಇವರ ಅಭಿಪ್ರಾಯವು. ಭಾರತದಲ್ಲಿ ಸಮಾಜವಾದವು ಹಬ್ಬಬೇಕೆಂದು ದುಡಿಯುತ್ತಿರುವರು. ಸ್ವಾತಂತ್ರ್ಯ, ಸಮತೆ, ವಿಶ್ವಬಂಧುತ್ವಗಳೇ ಸಮಾಜವಾದಿ ಪಕ್ಷದ ಗುರಿಯಾಗಿವೆ

ಕಮಲಾದೇವಿಯವರು ೧೯೦೪ರಲ್ಲಿ ಮಂಗಳೂರಲ್ಲಿ ಜನಿಸಿದರು. ಇವರು ಬಹಳ ಸುಖದಲ್ಲಿ ಬೆಳೆದವರು. ಇವರ ತಾಯಿಯವರು ಇವರಿಗೆ ಯಾವ ಕೊರತೆಯಾಗದಂತೆ ಎಲ್ಲ ಅನುಕೂಲತೆಗಳನ್ನು ಒದಗಿಸಿದ್ದರು

ಮಂಗಳೂರ ಕಾಲೇಜಿನಲ್ಲಿ ಶಿಕ್ಷಣ ಪಡೆದು, ಹೆಚ್ಚಿನ ಅಭ್ಯಾಸಕ್ಕಾಗಿ ಇಂಗ್ಲಂಡಕ್ಕೆ ತೆರಳಿದರು ಲಂಡನ ವಿಶ್ವವಿದ್ಯಾನಿಲಯದಲ್ಲಿ 'ಸಮಾಜ ಶಾಸ್ತ್ರ'ವನ್ನು ಓದಿದರು. ಇವರ ಕಾಲದಲ್ಲಿ ಹೆಂಗಸರು ಶಿಕ್ಷಣ ಪಡೆಯುವದು ಪಾಪವೆಂದು ತಿಳಿಯಲ್ಪಡುತ್ತಿತ್ತು. ಅದರಲ್ಲಿಯೂ ಇಂಗ್ಲಂಡಕ್ಕೆ ಹೋಗಿ ಶಿಕ್ಷಣ ಪಡೆಯುವದು ಮಹಾ ಅಪರಾಧವಾಗಿತ್ತು ಕಮಲಾದೇವಿಯವರು ಸಮಾಜದ ನಿರ್ಬಂಧಗಳನ್ನು ಮುರಿದು ತಮ್ಮ ಶಿಕ್ಷಣವನ್ನು ಪೂರ್ತಿಗೊಳಿಸಿದರು. ಇಂಗ್ಲಂಡದಲ್ಲಿರುವಾಗ ಇತಿಹಾಸ, ರಾಜಕಾರಣ ಶಾಸ್ತ್ರ, ಸಂಗೀತ ಮುಂತಾದ ಶಾಸ್ತ್ರಗಳನ್ನು ಅಭ್ಯಾಸಮಾಡಿದರು ಲಲಿತ ಕಲೆಗಳಲ್ಲಿ ಇವರಿಗೆ ಬಹಳ ಅಭಿರುಚಿಯಿತ್ತು. ನಾಟಕದಲ್ಲಿ ಪಾತ್ರವಹಿಸಿ ಉತ್ತಮ ನಟಿಯೆಂದು ಹೆಸರಾದರು. ಇವರು 'ವಸಂತಸೇನಾ' ದಲ್ಲಿ ಮಾಡಿದ ಪಾತ್ರವು ಜನರ ಮೆಚ್ಚಿಗೆಗೆ ಪಾತ್ರವಾಯಿತು.

ಕಮಲಾದೇವಿಯವರ ಮೇಲೆ ಮಾರ್ಕ್ಸನ ಗ್ರಂಥಗಳ ಪರಿಣಾಮವು ವಿಶೇಷವಾಗಿದೆ. ಸಮತೆ, ಸ್ವಾತಂತ್ರ್ಯಗಳು ಇವರ ಮುಖ್ಯ ಗುರಿಯಾಗಿರುವವು. ಮಹಿಳೆಯರಿಗೆ ಪುರುಷರಷ್ಟೇ ಹಕ್ಕು ಬಾಧ್ಯತೆಗಳು ದೊರೆಯಬೇಕೆಂದು ಇವರು ಹೆಣಗಾಡಿದರು.

ಜಗತ್ತಿನ ಬೇರೆ ಬೇರೆ ಪರಿಷತ್ತುಗಳಿಗೆ ಹಿಂದುಸ್ತಾನದ ಪ್ರತಿನಿಧಿಯಾಗಿ ಹೋಗಿದ್ದರು. ವಿದ್ಯಾರ್ಥಿಗಳ ಸಂಘಟನೆಯಲ್ಲಿಯೂ ಆಸ್ಥೆವಹಿಸಿ ಕೆಲಸ ಮಾಡಿದರು.

೧೯೩೦ ಹಾಗೂ ೧೯೩೨ ರಲ್ಲಿ ಸತ್ಯಾಗ್ರಹದಲ್ಲಿ ಭಾಗವಹಿಸಿ ಸೆರೆಮನೆ ಸೇರಿದರು.

ಸಮಾಜಶಾಸ್ತ್ರ, ರಾಜಕಾರಣ, ಸಾಹಿತ್ಯ ಮುಂತಾದವುಗಳ ಬಗ್ಗೆ ವಿಫುಲವಾಗಿ ಬರೆದಿದ್ದಾರೆ; ವಿಚಾರ ಮಾಡಿದ್ದಾರೆ. ಇವರಿಂದ ಕನ್ನಡ ನಾಡಿನ ಕೀರ್ತಿಯು ಉಳಿದ ಪ್ರಾಂತಗಳಲ್ಲಿ ಹಬ್ಬುವಂತಾಗಿದೆ.

## ವಿಠ್ಠಲಭಾಯಿ ಪಟೇಲ

ವಿಠ್ಠಲಭಾಯಿ ಪಟೇಲರು ಹೆಸರಾದ ವಾಗ್ಮಿಗಳಾಗಿದ್ದರು. ಶಾಸನ ಸಭೆಯಲ್ಲಿ ಸರಕಾರದ ಮೂಗು ಹಿಡಿಯುತ್ತಿದ್ದರು ಇವರನ್ನು ಎದುರಿಸುವ ಭಾಷಣಕಾರರು ಆ ಕಾಲದಲ್ಲಿರಲಿಲ್ಲ. ಇವರ ಭಾಷಣವು ತರ್ಕಬದ್ಧವೂ ಪಾಂಡಿತ್ಯ ಪೂರ್ಣವೂ ಆಗಿರುತ್ತಿದ್ದುದರಿಂದ ಇವರ ಭಾಷಣಗಳಿಗೆ ಬಹಳ ಮಹತ್ವವಿತ್ತು

ವಿಠ್ಠಲಭಾಯಿ ಪಟೇಲರು ೧೮೭೧ ರಲ್ಲಿ ಕೈರಾ ಜಿಲ್ಹೆಯಲ್ಲಿಯ ಕರ್ಸಾಡ ಎಂಬ ಗ್ರಾಮದಲ್ಲಿ ಹುಟ್ಟಿದರು.

ಇವರ ಶಿಕ್ಷಣವೆಲ್ಲವೂ ಕರ್ಸಾಡ ಮತ್ತು ನಡಿಯಾದದಲ್ಲಿ ಆಯಿತು. ೧೯೦೪ ರಲ್ಲಿ ಇವರು ಇಂಗ್ಲಂಡಕ್ಕೆ ಬ್ಯಾರಿಸ್ಟರ ಪರೀಕ್ಷೆಯ ಅಭ್ಯಾಸಕ್ಕಾಗಿ ತೆರಳಿದರು.

ಇಂಗ್ಲಂಡದಿಂದ ಮರಳಿ ಬಂದ ಬಳಿಕ ಸಾರ್ವಜನಿಕ ಕಾರ್ಯದಲ್ಲಿ ಭಾಗವಹಿಸತೊಡಗಿದರು, ೧೯೨೩ ರಲ್ಲಿ ಮುಂಬಯಿ ನಗರ ಸಭೆಯ ಸದಸ್ಯರಾಗಿ ಆರಿಸಿ ಬಂದರು. ನಗರ ಸಭೆಯ ಸದಸ್ಯರಾದ ಕೆಲವು ದಿವಸ ಗಳಲ್ಲಿಯೇ ನರಿಮನ್ನರ ಸಹಾಯದಿಂದ ಬಹಳ ಜನರಿಗೆ ಮತದಾನದ ಹಕ್ಕು ದೊರೆಯುವಂತೆ ಮಾಡಿದರು. ಮುಂಬಯಿ ನಗರಸಭೆಯಲ್ಲಿ ರಾಷ್ಟ್ರೀಯ ಪಕ್ಷವನ್ನು ಸ್ಥಾಪಿಸಿ ಅದರ ನಾಯಕರಾದರು. ನಗರ ಸಭೆಯ ಅಧಿಕಾರಿಗಳೆಲ್ಲರೂ ಖಾದಿಯನ್ನು ಧರಿಸುವಂತೆ ಮಾಡಿದರು. ಗವ್ಹರ್ನರ ಜನರಲ್ಲರಿಗೆ ಮಾನಪತ್ರ ಕೊಡುವ ಪದ್ಧತಿಯನ್ನು ನಿಲ್ಲಿಸಿದರು !

ಪಟೇಲರು ಮುಂಬಯಿ ನಗರ ಸಭೆಯ ಅಧ್ಯಕ್ಷರಾಗಿದ್ದರು. ಆಗ ನಗರ ಸಭೆಯವರು ಲಾರ್ಡ ರೀಡಿಂಗರಿಗೆ ಮಾನಪತ್ರ ಕೊಡಬೇಕೆಂದು ಗೊತ್ತು

ಮಾಡಿದರು ಆದರೆ ಅಧ್ಯಕ್ಷರಾದ ಪಟೇಲರು ಅದನ್ನು ವಿರೋಧಿಸಿ, ನಗರ ಸಭೆಯು ಪಾಸು ಮಾಡಿದ ಗೊತ್ತುವಳಿಯ ನಿಷೇಧಾರ್ಥವಾಗಿ ತಮ್ಮ ಹುದ್ದೆಗೆ ರಾಜೀನಾಮೆ ಕೊಟ್ಟರು. ಆದರೆ ತಿರುಗಿ ಇವರೇ ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಬಾರ್ಡೋಲಿಯಲ್ಲಿ ನಡೆದ ಸತ್ಯಾಗ್ರಹಕ್ಕೆ ತಿಂಗಳಿಗೆ ೧೦೦೦ ರೂಪಾಯಿ ಕೊಡುತ್ತಿದ್ದರು

ತಮ್ಮ ವಕೀಲಿಯನ್ನು ಬಿಟ್ಟುಕೊಟ್ಟು ಶಾಸನ ಸಭೆಯನ್ನು ಸೇರಿದರು ಶಾಸನ ಸಭೆಯಲ್ಲಿ ರೈತರ ಪಕ್ಷ ಹಿಡಿದು ಬಡಿದಾಡಿದರು. ಅಂತರ್ಜಾತೀಯ ವಿವಾಹಗಳು ಮನ್ನಿಸಲ್ಪಡಬೇಕೆಂದು ಅವರು ಒಂದು ಬಿಲ್ಲನ್ನು ತರುವವರಿದ್ದರು. ಆದರೆ ಸದಸ್ಯರ ವಿರೋಧದಿಂದ ಅದು ಸಾಧ್ಯವಾಗಲಿಲ್ಲ

ಪಟೇಲರು ಟಿಳಕ ಪಂಗಡಕ್ಕೆ ಸೇರಿದವರು. ೧೯೧೮ರಲ್ಲಿ ಮುಂಬಯಿಯಲ್ಲಿ ಕೂಡಿದ ರಾಷ್ಟ್ರೀಯ ಮಹಾ ಪರಿಷತ್ತಿನ ಸ್ವಾಗತಾಧ್ಯಕ್ಷರಾಗಿದ್ದರು.

ಸ್ವರಾಜ್ಯ ಪಕ್ಷವು ಸ್ಥಾಪನೆಯಾದಾಗ ಅದರ ಸೂತ್ರಧಾರರಲ್ಲಿ ಇವರೊಬ್ಬರಾಗಿದ್ದರು ಇವರ ಸಿಂಹನಾದವು ಜನರನ್ನು ಬಡಿದೆಬ್ಬಿಸುತ್ತಿತ್ತು.

೧೯೨೫ ರಲ್ಲಿ ಹಿಂದುಸ್ತಾನದ ಇತಿಹಾಸದಲ್ಲಿ ಮೊದಲನೇ ಸಾರಿ ಪಟೇಲರು ಶಾಸನ ಸಭೆಯ ಅಧ್ಯಕ್ಷರಾಗಿ ಆರಿಸಲ್ಪಟ್ಟರು ನಾಯುಡುರವರ ಸೀರೆಯನ್ನು ತೆಗೆದುಕೊಂಡು ಅದರಿಂದ ಗೌನ ಮತ್ತು ಟೊಪ್ಪಿಗೆಯನ್ನು ಮಾಡಿಕೊಂಡರು. ಯಾಕಂದರೆ ಅಧ್ಯಕ್ಷರಾದ ಪಟೇಲರು ಪರದೇಶೀ ನೂಲಿನಿಂದ ಸಿದ್ಧವಾದ ಗೌನನ್ನೂ ಟೊಪ್ಪಿಗೆಯನ್ನೂ ಧರಿಸುವದಕ್ಕೆ ಸಿದ್ಧರಾಗಿರಲಿಲ್ಲ.

೧೯೩೦ ರಲ್ಲಿ ಕಾಂಗ್ರೆಸ್ ವರ್ಕಿಂಗ ಕಮೀಟಿಯು ದಿಲ್ಲಿಯಲ್ಲಿ ಕೂಡಿತ್ತು. ಸರಕಾರದವರು ಆದರ ಮೇಲೆ ನಿರ್ಬಂಧ ಹೇರಿ ವರ್ಕಿಂಗ ಕಮೀಟಿಯ ಸದಸ್ಯರನ್ನು ಬಂಧಿಸಿದರು. ಅದರಲ್ಲಿ ಪಟೇಲರೂ ಸೆರೆಮನೆ ಸೇರಿದರು. ಅವರಿಗೆ ೬ ತಿಂಗಳ ಶಿಕ್ಷೆಯಾಯಿತು ಆದರೆ ಸೆರೆಮನೆಯಲ್ಲಿ ಪಟೇಲರ ಪ್ರಕೃತಿಯು ಕೆಟ್ಟದ್ದರಿಂದ ಸರಕಾರವು ಅವರ ಅವಧಿ ಮುಗಿಯುವ ಮೊದಲೇ ಅವರನ್ನು ಬಿಡುಗಡೆ ಮಾಡಿತು. ಪಟೇಲರು ತಮ್ಮ ದೇಹ

ಸ್ಥಿತಿಯನ್ನು ಸುಧಾರಿಸಿಕೊಳ್ಳುವದಕ್ಕಾಗಿ ವ್ಹಿಯೇನ್ನಾಕ್ಕೆ ಪ್ರಯಾಣಬೆಳಸಿದರು. ವ್ಹಿಯೇನ್ನಾದಲ್ಲಿ ಕೆಲವು ದಿವಸ ಇದ್ದು ದುಂಡುಮೇಜಿನ ಪರಿಷತ್ತಿಗಾಗಿ ಇಂಗ್ಲಂಡಕ್ಕೆ ಹೋದರು. ಮಹಾತ್ಮರೊಂದಿಗೆ ಇಂಗ್ಲಂಡದಿಂದ ಹಿಂದುಸ್ಥಾನಕ್ಕೆ ಬಂದರು. ಸರಕಾರವು ಸುಗ್ರೀವಾಜ್ಞೆ ಹೊರಡಿಸಿ ಇವರನ್ನು ಬಂಧಿಸಿತು. ಸರಕಾರವು ಇವರ ಸೂಕ್ಷ್ಮ ಪ್ರಕೃತಿಯನ್ನು ನೋಡಿ ಕೂಡಲೇ ಬಿಡುಗಡೆ ಮಾಡಿದರು.

ವಿಠ್ಠಲಭಾಯಿ ಪಟೇಲರು ಅಮೇರಿಕೆಗೆ ಹೋಗಿ ೬ ತಿಂಗಳಲ್ಲಿ ೮೫ ಉಪನ್ಯಾಸಗಳನ್ನಿತ್ತರು. ಅಮೇರಿಕೆಯಲ್ಲಿ ಭಾರತೀಯರಿಗಾಗಿ ಸಹಾನುಭೂತಿಯನ್ನು ಸಂಪಾದಿಸಿದರು. ನ್ಯೂಯಾರ್ಕ, ಬೋಸ್ಟನ್‌ಗಳಲ್ಲಿಯ ಮೇಯರರು ಪಟೇಲರನ್ನು ಸ್ವಾಗತಿಸಿದರು. ಅಮೇರಿಕನ್ನರು ಭಾರತೀಯರಿಗೆ ಸ್ವಾತಂತ್ರ್ಯ ಯುದ್ಧದಲ್ಲಿ ಸಹಾಯ ಮಾಡಬೇಕೆಂದು ಹೇಳಿದರು.

ಆಯರ್ಲಂಡಕ್ಕೆ ಭೆಟ್ಟಿಕೊಟ್ಟು ಡಿವ್ಹಲೆರಾರ ಸಂಗಡ ಮಾತನಾಡಿದರು. ಆಯರ್ಲಂಡ ಹಾಗೂ ಇಂಗ್ಲಂಡಗಳ ನಡುವೆ ನಡೆದ ತಂಟೆಯಲ್ಲಿ ಪಟೇಲರು ಮಧ್ಯಸ್ಥರಾಗಬೇಕೆಂದು ಡಿವ್ಹಲೆರಾರು ಸೂಚಿಸಿದ್ದರು. ಆದರೆ ಪಟೇಲರ ಆರೋಗ್ಯವು ಕೆಟ್ಟಿದ್ದರಿಂದ ಅವರು ವ್ಹಿಯೆನ್ನಾಕ್ಕೆ ತೆರಳಿದರು.

ವಿಠ್ಠಲಭಾಯಿ ಪಟೇಲರು ಜಿನಿವ್ಹಾದ ಹತ್ತಿರಿರುವ ದವಾಖಾನೆಯಲ್ಲಿ ತೀರಿಕೊಂಡರು. ಪಟೇಲರು ತೀರಿಕೊಳ್ಳುವದಕ್ಕಿಂತ ಮೊದಲು ಕೆಳಗಿನ ಸಂದೇಶ ಕೊಟ್ಟರು.

'ನನ್ನ ದೇಶಬಾಂಧವರಿಗೂ, ನನ್ನ ದೇಶದಲ್ಲಿರುವ ಹಾಗೂ ಬೇರೆ ದೇಶಗಳಲ್ಲಿರುವ ನನ್ನ ಮಿತ್ರರಿಗೂ ನಾನು ಶುಭಾಶಯಗಳನ್ನು ಕೋರುವೆನು. ನಾನು ಮರಣಹೊಂದುವದಕ್ಕಿಂತ ಮೊದಲು ಭಾರತವು ಸ್ವತಂತ್ರವಾಗಲೆಂದು ಪ್ರಾರ್ಥಿಸುವೆನು.'

ಪಟೇಲರ ಕಳೇಬರವನ್ನು ಹಿಂದುಸ್ಥಾನಕ್ಕೆ ತರಲಾಯಿತು. ರುದ್ರಭೂಮಿಯಲ್ಲಿ ಮಾತನಾಡುತ್ತ ಸರೋಜಿನಿಯವರು 'ಪಟೇಲರು ಮೃತರಾದರು. ಆದರೆ ಅವರ ಆತ್ಮವು ಯಾವಾಗಲೂ ಹಿಂದುಸ್ಥಾನದ ಸ್ವಾತಂತ್ರ್ಯ ಯುದ್ಧದಲ್ಲಿ ನಮಗೆ ಮಾರ್ಗದರ್ಶಕವಾಗಿರುವದು' ಎಂದು ನುಡಿದರು.

---

# ಸಾಹಿತ್ಯ ಸಾಮ್ರಾಟ ಕೇಳಕರ

ಸಾಹಿತ್ಯದಲ್ಲಿ ಸಾಮ್ರಾಟ ಪದವಿ ದೊರೆಯುವದು ದುರ್ಲಭ. ಕತೆಗಾರರಾಗಿದ್ದವರು ನಾಟಕಕಾರರೂ, ವಿಮರ್ಶಕರೂ, ಕವಿಗಳೂ, ರಾಜಕಾರಣಿಗಳೂ ಆಗಿರುವದು ಸುಲಭಸಾಧ್ಯವಾದುದಲ್ಲ. ಒಂದು ವಿಭಾಗದಲ್ಲಿಯೇ ನೈಪುಣ್ಯವನ್ನು ಪಡೆಯುವದಕ್ಕೆ ಬಹಳ ಕಾಲ ಹಿಡಿಯುವದು. ಕೇಳಕರರು ಸಾಹಿತ್ಯದ ಯಾವ ರಂಗವನ್ನೂ ಪ್ರವೇಶಿಸದೇ ಇಲ್ಲ. ಅವರು ಕಾದಂಬರಿಗಳನ್ನೂ ನಾಟಕಗಳನ್ನೂ ಬರೆದಿರುವರು. ವಿಮರ್ಶೆ, ಚರಿತ್ರೆ, ಇತಿಹಾಸ, ತತ್ವಜ್ಞಾನ, ರಾಜಕೀಯ ಮುಂತಾದವುಗಳ ಬಗ್ಗೆ ಬಹಳ ವಿಚಾರ ಮಾಡಿದ್ದಾರೆ. ಮಹಾರಾಷ್ಟ್ರದಲ್ಲಿ ಇಂದು ಯಾರಿಗಾದರೂ ಸಾಹಿತ್ಯ ಸಾಮ್ರಾಟ ಎಂಬ ಬಿರುದು ಇರುವದಾದರೆ ಅದು ಇವರಿಗೊಬ್ಬರಿಗೇ ಇದೆ. ಕೇಳಕರರ ಸಮಗ್ರ ಸಾಹಿತ್ಯವು ೧೨ ಭಾಗಗಳಲ್ಲಿ ಪ್ರಕಟವಾಗಿದೆ. ಪ್ರತಿಯೊಂದು ಭಾಗವು ೧೦೦೦ ಪುಟಗಳಷ್ಟು ಇರುವದು! ಇದರ ಮೇಲಿಂದಲೇ ಅವರು ಎಷ್ಟು ವಿಷಯಗಳ ಬಗ್ಗೆ ಬರೆದಿದ್ದಾರೆಂಬುದು ತಿಳಿಯುವದು. ಅವರ ಪ್ರತಿಭಾ ಶಕ್ತಿಯು ಎಷ್ಟು ಬಗೆಯಾಗಿ ಓಡಬಲ್ಲದು ಎಂಬುದನ್ನು ತಿಳಿಯಬೇಕಾದರೆ ಅವರ ಎಲ್ಲ ಗ್ರಂಥಗಳನ್ನು ಓದಬೇಕು.

ಕೇಳಕರರು ಮರಾಠಿ ಭಾಷೆಯಲ್ಲಿ ಅಷ್ಟೇ ವಿದ್ವಾಂಸರಲ್ಲ. ಬಂಗಾಲಿ, ಇಂಗ್ಲೀಷ, ಸಂಸ್ಕೃತಗಳಲ್ಲಿಯೂ ಅವರಿಗೆ ತುಂಬಾ ಪರಿಶ್ರಮವಿತ್ತು. 'ಸಾಹಿತ್ಯ ಮತ್ತು ವಿನೋದ' ಎಂಬ ಪುಸ್ತಕದಲ್ಲಿ ಅವರು ಕೊಟ್ಟಿರುವ 'ಇಂಗ್ಲಿಷ ಸಾಹಿತ್ಯದಲ್ಲಿಯ ವಿನೋದ' ಎಂಬ ಪ್ರಕರಣವನ್ನು ಓದಿದರೆ ಅವರ ಇಂಗ್ಲಿಷ ಅಭ್ಯಾಸವು ಎಷ್ಟು ದೊಡ್ಡದಾಗಿತ್ತು ಎಂಬುದು ಕಂಡು ಬರುವದು.

ಕೇಳಕರರು ೧೮೭೨ರಲ್ಲಿ ಮಿರಜದಲ್ಲಿ ಹುಟ್ಟಿದರು. ಕೊಲ್ಹಾಪುರ ಮತ್ತು ಪುಣೆಯಲ್ಲಿ ವಿದ್ಯಾಭ್ಯಾಸ ಪೂರ್ಣ ಮಾಡಿದರು. ೧೮೯೪ರಲ್ಲಿ ಎಲ್‌ಎಲ್. ಬಿ ಡಿಗ್ರಿಯನ್ನು ತೆಗೆದುಕೊಂಡರು. ಕೇಳಕರರು ವಕೀಲರಾ

ದರೂ ಇವರ ಅಭಿರುಚಿಯು ಮಾತ್ರ ಬೇರೆ ಕಡೆಗಿತ್ತು. ಸಾಹಿತ್ಯವೇ ಇವರ ಪ್ರೀತಿಯ ವಿಷಯವಾಗಿತ್ತು.

ಇವರ ಸಾಹಿತ್ಯಜೀವನವು ಇವರು ವೃತ್ತಪತ್ರಿಕೋದ್ಯೋಗಿಯಾದಾಗಿನಿಂದಲೇ ಪ್ರಾರಂಭವಾಯಿತು. ಇವರ ಬರಹಗಳಲ್ಲಿ ಅಲಂಕಾರಿಕವಾದುದೇನೂ ಇರಲಿಲ್ಲ. ಇವರ ಭಾಷೆಯು ಸರಳವಾದರೂ ಸುಂದರವಾಗಿದ್ದು. ಟಿಳಕರಿಗೆ ಕೇಳಕರರ ಪ್ರತಿಭಾಶಕ್ತಿಯು ಬೇಗನೆ ಕಂಡುಬಂದದ್ದರಿಂದ ಅವರಿಗೆ ಬರೆಯಲು ಉತ್ತೇಜನ ಕೊಟ್ಟರು. ಟಿಳಕರು ಲಾ ಕ್ಲಾಸು ನಡೆಸುವಾಗ ಕೇಳಕರರ ಸಹಾಯ ಪಡೆಯುತ್ತಿದ್ದರು.

ಟಿಳಕರು ೧೮೯೭ರಲ್ಲಿ ನ್ಯಾಯಾಲಯಕ್ಕೆ ಎಳೆಯಲ್ಪಟ್ಟಿದ್ದರಿಂದ, ಕೇಳಕರರು ಟಿಳಕರ ಸ್ಥಾನದಲ್ಲಿ ಕುಳಿತರು. ಮರಾಠಾ ಮತ್ತು ಕೇಸರಿ ವೃತ್ತಪತ್ರಿಕೆಗಳ ಸಂಪಾದಕರಾದರು. ೧೮೯೮ರಲ್ಲಿ ರಾಷ್ಟ್ರೀಯ ಮಹಾಸಭೆಯ ಅಧ್ಯಕ್ಷರಾದ ಸುಬ್ರಮಣ್ಯ ಅಯ್ಯರರು ತಮ್ಮ ಭಾಷಣದಲ್ಲಿ ಕೇಳಕರರ ಪ್ರತಿಭಾ ಶಕ್ತಿಯನ್ನು ಕೊಂಡಾಡಿರುವರು

ಲೋಕಮಾನ್ಯರ ಬಿಡುಗಡೆಯಾದ ಬಳಿಕ ಕೇಳಕರರು ಮರಾಠಾ ಪತ್ರಿಕೆಯ ಸಂಪಾದಕರಾದರು. ಲೋಕಮಾನ್ಯರು ಮತ್ತೆ ಸೆರೆಮನೆ ಸೇರಿದ್ದರಿಂದ ಕೇಳಕರರು ಪುನಃ ಕೇಸರಿ ಮತ್ತು ಮರಾಠಾ ಪತ್ರಿಕೆಯ ಸಂಪಾದಕರಾಗಬೇಕಾಯಿತು

ಕೇಳಕರರು ೨೫೦ಕ್ಕಿಂತ ಹೆಚ್ಚು ಸಾಲು ಕವಿತೆಗಳನ್ನು ಬರೆದಿರುವರು. ಆದರೆ ಕೇಳಕರರು ಕವಿಗಳೆಂದು ಪ್ರಸಿದ್ಧರಾಗಲಿಲ್ಲ.

೧೯೧೭ರಲ್ಲಿ ಕೇಳಕರರು 'ಟಿಳಕ ಹೋಮ್ ರೂಲ ಲೀಗ'ದ ಕಾರ್ಯದರ್ಶಿಗಳಾಗಿದ್ದರು ೧೯೨೩ರಲ್ಲಿ ಸ್ವರಾಜ್ಯ ಪಕ್ಷವನ್ನು ಸಂಘಟಿಸುವದಕ್ಕಾಗಿ ನೆಹರು ಮತ್ತು ದಾಸರಿಗೆ ಸಹಾಯಕರಾಗಿದ್ದರು.

ಇವರು 'ಪ್ರಜಾಸತ್ತಾತ್ಮಕ ಸ್ವರಾಜ್ಯಪಕ್ಷ'ದ ಅಧ್ಯಕ್ಷರಾಗಿದ್ದರು. ಮಹಾರಾಷ್ಟ್ರ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರಾಗಿದ್ದರು. ದುಂಡು ಮೇಜಿನ ಪರಿಷತ್ತಿಗೆ ಹಿಂದುಸ್ತಾನದ ಪ್ರತಿನಿಧಿಯಾಗಿ ಇಂಗ್ಲಂಡಕ್ಕೆ ಹೋಗಿದ್ದರು.

ಕೇಳಕೇಸು ಅನೇಕ ಮಹಾರಾಷ್ಟ್ರದ ತರುಣರನ್ನು ಹುರಿದುಂಬಿಸಿ ಮರಾಠಿಯಲ್ಲಿ ಬರೆಯಲು ಅವರಿಗೆ ಉತ್ತೇಜನ ಕೊಟ್ಟರು. ಹಲವಾರು ಗ್ರಂಥಗಳಿಗೆ ಮುನ್ನುಡಿ ಬರೆದು ತರುಣರ ಬೆನ್ನು ಚಪ್ಪರಿಸಿದರು. ವೃತ್ತ ಪತ್ರಿಕಾ ವ್ಯವಸಾಯದಲ್ಲಿ ನವಮನ್ವಂತರವನ್ನು ಆರಂಭ ಮಾಡಿದರು. ಇವರು ವೃತ್ತಪತ್ರಿಕೆಯಲ್ಲಿ ಬರೆದ ಲೇಖನಗಳೆಲ್ಲವೂ ಪುಸ್ತಕ ರೂಪದಲ್ಲಿ ಪ್ರಕಟವಾಗಿವೆ. ಆ ಲೇಖಗಳಲ್ಲಿ ಇವರ ವ್ಯಕ್ತಿತ್ವವು ಎದ್ದು ಕಾಣುವದು.

## ತುಷಾರಕಾಂತಿ ಘೋಷ

ಭಾರತೀಯ ವೃತ್ತಪತ್ರಿಕೆಗಳಲ್ಲಿ "ಅಮೃತ ಬಝಾರ" ಪತ್ರಿಕೆಯ ಸ್ಥಾನವು ಮೇಲ್ಮಟ್ಟದ್ದು. ಈ ಪತ್ರಿಕೆಯ ಲೇಖನಗಳು ತರ್ಕಶುದ್ಧವೂ ವಿಚಾರಪರಿಪೂರ್ಣವೂ ಆಗಿರುವವು "ಅಮೃತ ಬಝಾರ" ಪತ್ರಿಕೆಯು ಲೋಕಪ್ರಿಯವಾಗುವದಕ್ಕೆ ತುಷಾರಕಾಂತಿ ಘೋಷರೇ ಕಾರಣರು.

ತುಷಾರಕಾಂತಿ ಘೋಷರು ೧೮೯೮ರಲ್ಲಿ ಜನಿಸಿದರು. ತುಷಾರ ಕಾಂತಿ ಘೋಷರು ವಂಗವಾಸಿ ಮತ್ತು ವಿದ್ಯಾಸಾಗರ ಕಾಲೇಜಗಳಲ್ಲಿ ವಿದ್ಯಾಭ್ಯಾಸ ಮಾಡಿದರು. ೧೯೨೦ರಲ್ಲಿ ಬಿ. ಎ. ಪಾಸಾಗಿ "ಅಮೃತಬಝಾರ" ಪತ್ರಿಕೆಯಲ್ಲಿ ನೌಕರರಾದರು

ಕೆಲವು ದಿವಸಗಳ ವರೆಗೆ ಕರಡು ತಿದ್ದುವ ಕೆಲಸ ಮಾಡಿದರು. ೧೯೨೧ರಲ್ಲಿ ಉಪಸಂಪಾದಕರಾದರು. ಉಪಸಂಪಾದಕರ ಕೆಲಸವು ಕಠಿಣವಾದದ್ದು ಈ ಕೆಲಸದಲ್ಲಿ ದೀರ್ಘೋದ್ಯೋಗವೂ, ತಾಳ್ಮೆಯೂ ಬೇಕು. ಈ ಗುಣಗಳೆಲ್ಲವೂ ತುಷಾರಕಾಂತಿ ಘೋಷರಲ್ಲಿದ್ದುದರಿಂದ ಅವರು ಬೇಗನೆ ಪತ್ರಿಕಾ ವ್ಯವಸಾಯದಲ್ಲಿ ಕೀರ್ತಿಶಾಲಿಗಳಾದರು.

ಸುದ್ದಿಯನ್ನು ಸಂಗ್ರಹಿಸುವದು, ಮಹತ್ವವಿಲ್ಲದ ಸುದ್ದಿಯನ್ನು ಬಿಟ್ಟು ಬಿಡುವದು, ಅಂದವಾಗಿ ಮುದ್ರಣವಾಗುವಂತೆ ನೋಡುವದು ಇವು ಉಪಸಂಪಾದಕರ ಕರ್ತವ್ಯಗಳು.

೧೯೩೭ರಲ್ಲಿ ಘೋಷರು ಉಪಪ್ರಧಾನ ಸಂಪಾದಕರಾದರು. ಕೆಲವು ದಿವಸಗಳಲ್ಲಿ ಸಂಪಾದಕರಾದರು.

೧೯೩೫ರಲ್ಲಿ ಜಾಗತಿಕ ಪತ್ರಿಕಾ ಪರಿಷತ್ತಿಗೆ ತುಷಾರಕಾಂತಿ ಘೋಷರು ಹಿಂದುಸ್ತಾನದ ಪ್ರತಿನಿಧಿಗಳಾಗಿ ಹೋಗಿದ್ದರು. ಅಖಿಲ ಭಾರತೀಯ ಪತ್ರಿಕಾ ಪರಿಷತ್ತಿನ ಉಪಾಧ್ಯಕ್ಷರಾಗಿದ್ದರು ಇವರ ಪತ್ರಿಕೆಯಲ್ಲಿ ಒಬ್ಬರು ಒಂದು ಲೇಖವನ್ನು ಬರೆದರು ಅವರ ಹೆಸರನ್ನು ಹೇಳಲು ನಿರಾಕರಿಸಿ ತುಷಾರಕಾಂತಿ ಘೋಷರು ಮೂರು ತಿಂಗಳ ಸೆರೆಮನೆ ಸೇರಿದರು.

ಇವರ ಮುತ್ಸದ್ದಿತನದಿಂದ ಪತ್ರಿಕೆಯು, ಹೆಚ್ಚು ಲೋಕಪ್ರಿಯವಾಗುತ್ತಿರುವದು.

## ಜಯಪ್ರಕಾಶ ನಾರಾಯಣ

"ಜಯಪ್ರಕಾಶ ನಾರಾಯಣರು ಸಾಮಾನ್ಯ ಕೆಲಸಗಾರರಲ್ಲ. ಸಾಮ್ಯವಾದದಲ್ಲಿ ಅವರು ಆಧಾರ ಪುರುಷರು"

೧೯೪೨ರಲ್ಲಿ ದೇಶದಲ್ಲಿ ಗಾಂಧೀಜಿ ದೊಡ್ಡ ಕ್ರಾಂತಿಯು ಪ್ರಾರಂಭವಾಯಿತು. ಗಾಂಧೀಜಿಯವರು ಬ್ರಿಟಿಶರಿಗೆ ಹಿಂದುಸ್ತಾನದಿಂದ ಕಾಲ್ತೆಗೆಯಲು ಕೇಳಿಕೊಂಡರು. ಸರಕಾರವು ಕಾಂಗ್ರೆಸ ಮುಖಂಡರನ್ನು ಬಂಧನದಲ್ಲಿಟ್ಟಿತು. ದೇಶದ ತುಂಬ ಆಂದೋಲನವು ಪ್ರಾರಂಭವಾಯಿತು. ಜನರು ದಿಕ್ಕುಗಾಣದಾದರು. "ಮಾಡಿರಿ ಇಲ್ಲವೆ ಮಡಿಯಿರಿ' ಎಂದು ಜನರಿಗೆ ಗಾಂಧೀಜಿಯವರು ಹೇಳಿದರು. ಜಯಪ್ರಕಾಶರು ಈ ಕ್ರಾಂತಿಯಲ್ಲಿ ಭಾಗವಹಿಸಿದರು. ೧೯೪೨ನೆಯ ನವ್ಹಂಬರ ರಾತ್ರಿ ಹಜಾರಿಬಾಗ ಸೆರೆಮನೆಯಿಂದ ಓಡಿ ಹೋದರು. ಅವರನ್ನು ಹಿಡಿದು ಕೊಟ್ಟವರಿಗೆ ೧೦,೦೦೦ ರೂ. ಬಹುಮಾನ ಕೊಡುವದಾಗಿ ಸರಕಾರವು ಸಾರಿತು. ಜಯಪ್ರಕಾಶರರು ಉತ್ತರ ಹಿಂದುಸ್ತಾನದಲ್ಲಿ ತಿರುಗಾಡುತ್ತ ತಲೆ ಮರೆಸಿಕೊಂಡು ಕಾರ್ಯ ಮಾಡುತ್ತಿದ್ದವರಿಗೆ ಮಾರ್ಗದರ್ಶನ ಮಾಡುತ್ತಿದ್ದರು. ನೇಪಾಳ ಸರಕಾರವು ಇವರನ್ನು ಸೆರೆ ಹಿಡಿಯಿತು. ಪುನಃ ತಪ್ಪಿಸಿಕೊಂಡರು. ಸಪ್ಟಂಬರದಲ್ಲಿ ಮತ್ತೆ ಸರಕಾರವು ಇವರನ್ನು ಸೆರೆ ಹಿಡಿಯಿತು. ದಿಲ್ಲಿಯ ಕೆಂಪು ಕೋಟೆ ಮತ್ತು ಲಾಹೋರ ಸೆರೆಮನೆಯಲ್ಲಿ

ಸರಕಾರವು ಇವರನ್ನು ಹಿಂಸೆಗೀಡು ಮಾಡಿತು. ಮಂಜು ಗಡ್ಡೆ ಇಟ್ಟಿದ್ದ ಕುರ್ಚಿಯ ಮೇಲೆ ಕುಳ್ಳಿರಿಸಿ ನಿದ್ದೆಗೂ ಅವಕಾಶ ಕೊಡದೆ ತನ್ನ ರಾಕ್ಷಸೀ ಮನೋಭಾವವನ್ನು ತೋರಿಸಿತು. ಜಯಪ್ರಕಾಶರು ೧೯೪೨ರಲ್ಲಿ ಕ್ರಾಂತಿಯ ಬಗ್ಗೆ ಯಾವ ಸಂಗತಿಯನ್ನೂ ಹೇಳಲಿಲ್ಲ. ಎಲ್ಲ ಕಡೆಗೂ ವೈರಿಗಳು ಸೋತಿದ್ದರು. ಕ್ರಿಪ್ಸ, ಪೆಥಿಕ್ ಲಾರೆನ್ಸ ಮತ್ತು ಅಲೆಕ್ಸಾಂಡರ ಇವರು ಹಿಂದುಸ್ತಾನದೊಡನೆ ಒಪ್ಪಂದ ಮಾಡಿಕೊಳ್ಳಲು ಆಗಮಿಸಿದರು. ಮೊದಲು ಕ್ರಾಂತಿವೀರರಾದ ಯುವಕರ ಬಿಡುಗಡೆಯಾಗಬೇಕೆಂದು ಗಾಂಧೀಜಿಯವರು ಹೇಳಿದರು. ಸರಕಾರವು ಜಯಪ್ರಕಾಶರನ್ನು ಬಿಡುಗಡೆ ಮಾಡಿತು.

ಜಯಪ್ರಕಾಶರು ೧೯೦೨ರಲ್ಲಿ ಸರಾಫ ಜಿಲ್ಹೆಯ ಸಿತಾಬ್ದರ ಎಂಬ ಹಳ್ಳಿಯಲ್ಲಿ ರೈತ ಕುಟುಂಬದಲ್ಲಿ ಜನ್ಮಿಸಿದರು. ೧೯೨೧ರಲ್ಲಿ ಚಳವಳಿಯಲ್ಲಿ ಭಾಗವಹಿಸಿ ಕಾಲೇಜು ತ್ಯಜಿಸಿದರು. ೧೯೨೨ರಲ್ಲಿ ಅಮೇರಿಕಾ ದೇಶಕ್ಕೆ ಶಿಕ್ಷಣ ಮುಂದುವರಿಸುವದಕ್ಕಾಗಿ ನಡೆದರು. ಸರಕಾರದ ವಿದ್ಯಾರ್ಥಿ ವೇತನವನ್ನು ತಿರಸ್ಕರಿಸಿದರು. ಕಾಲೇಜು ಶಿಕ್ಷಣವನ್ನು ಪಡೆಯುವದಕ್ಕೆ ಅವರ ಬಳಿ ಹಣವಿರಲಿಲ್ಲ. ಕ್ಯಾಲಿಫೋರ್ನಿಯಾದಲ್ಲಿ ಹಣ್ಣಿನ ತೋಟದಲ್ಲಿ ಕೆಲಸ ಕೈಕೊಂಡರು. ಹಣ ಕಡಿಮೆಯಾದಾಗ ಹಣ್ಣಿನ ತೋಟದಲ್ಲಿ ಕೆಲಸ ಮಾಡುತ್ತಿದ್ದರು ದಿನಾಲು ಹತ್ತು ತಾಸು ಕೆಲಸ ಮಾಡುತ್ತಿದ್ದರು.

ಕವಿನ್ಸ ನ್ಸಿನ್ ವಿಶ್ವವಿದ್ಯಾಲಯದಲ್ಲಿ ಹೊಸ ಬೆಳಕನ್ನು ಕಂಡರು. ಇಲ್ಲಿದ್ದಾಗಲೇ ಸಾಮ್ಯವಾದದ ಅಭ್ಯಾಸ ಮಾಡಿದರು. ಎಂ. ಎ. ಪರೀಕ್ಷೆಗೆ ಅರ್ಥಿಕ ಸಮಸ್ಯೆಯ ಮೇಲೆ ಒಂದು ಪ್ರಬಂಧ ಬರೆದು ಕೊಟ್ಟರು ಅಮೇರಿಕೆಯಲ್ಲಿ ೮ ವರ್ಷ ಇದ್ದರು. ಭೌತಿಕ ಶಾಸ್ತ್ರ ರಸಾಯನ ಶಾಸ್ತ್ರ, ಅರ್ಥ ಶಾಸ್ತ್ರಗಳನ್ನು ಚೆನ್ನಾಗಿ ಅಭ್ಯಾಸ ಮಾಡಿದರು.

೧೯೨೯ರಲ್ಲಿ ಅಮೇರಿಕೆಯಿಂದ ಹಿಂದುಸ್ತಾನಕ್ಕೆ ಬಂದರು. ಇವರು ಹಿಂದುಸ್ತಾನಕ್ಕೆ ಬಂದಾಗ ಮಹಾತ್ಮಾಜಿಯವರು ಅಸಹಕಾರ ಚಳವಳಿ ಹೂಡಿದ್ದರು ಬಂದ ಕೂಡಲೇ ಕೂಲಿಕಾರರ ಸಂಘವನ್ನು ಸ್ಥಾಪಿಸಿದರು. ಜನತೆಯನ್ನು ಆರ್ಥಿಕ ಗುಲಾಮಗಿರಿಯಿಂದ ಬಿಡಿಸುವದೇ ಇವರ ಗುರಿಯಾಗಿತ್ತು. ಕರಾಚಿ ಕಾಂಗ್ರೆಸ್ಸಿನ ತರುವಾಯ ಮತ್ತೆ ಚಳವಳಿ ಪ್ರಾರಂಭವಾಯಿತು. ಸರಕಾರವು ಜಯಪ್ರಕಾಶರನ್ನು ಸೆರೆ ಹಿಡಿಯಿತು. ೧೯೩೨ರ

ವರೆಗೆ ಸೆರೆಮನೆಯಲ್ಲಿದ್ದನು. ಸೆರೆಮನೆಯಲ್ಲಿದ್ದಾಗ ಸಮತಾವಾದಿ ಪಕ್ಷ ತೆರೆಯಬೇಕೆಂದು ನಿರ್ಣಯಿಸಿದರು.

ಕಾಂಗ್ರೆಸ್ಸು ಶಾಸನ ಸಭೆಯನ್ನು ಪ್ರವೇಶಿಸಬೇಕೆಂದು ನಿರ್ಣ ಯಿಸಿತು. ಜಯಪ್ರಕಾಶರು ಇದನ್ನು ವಿರೋಧಿಸಿದರು. ಗವ [illegible] ಪ್ರಾಂತದ ಮುಖ್ಯಾಧಿಕಾರಿಯಾಗಿದ್ದನು. ಮಂತ್ರಿಗಳ ಕೈಯಲ್ಲಿ [illegible] ಅಧಿಕಾರ ಬಂದಿರಲಿಲ್ಲ ಇಂಥ ಸಮಯದಲ್ಲಿ ಅಧಿಕಾರ [illegible] ಹಾಸ್ಯಾಸ್ಪದವಾಗುವದೆಂದು ಜಯಪ್ರಕಾಶರು ಹೇಳಿದರು [illegible] ಶರು ದೇಶದಲ್ಲಿ ಸಮತಾವಾದವನ್ನು ಪ್ರಚಾರ ಮಾಡುವದಕ್ಕಾಗಿ ಸಮತಾ ವಾದಿ ಪಕ್ಷವನ್ನು ಸ್ಥಾಪಿಸಿದರು.

ರೈತ ಕೂಲಿಕಾರರಿಗೆ ಇದು ತಮ್ಮ ರಾಜ್ಯವೆಂದೆನಿಸಬೇಕು ದೇಶ ದಲ್ಲಿ ಬಡವರ ಸಂಖ್ಯೆಯು ಹೆಚ್ಚಾಗಿದೆ. ಸಾವಿರಾರು ಜನರು ಹೊಟ್ಟೆಗಿ ಲ್ಲದೆ ಸಾಯುತ್ತಿರುವರು. ಶ್ರೀಮಂತರು ಐಷಾರಾಮದಿಂದ ಕಾಲ ಕಳೆಯು ತ್ತಿರುವರು. ಈ ಭೇದವು ಹೋಗಬೇಕು. ರೈತ ಮತ್ತು ಕೂಲಿಕಾರರಿಗೆ ಹೊಟ್ಟೆತುಂಬ ಆಹಾರ ದೊರೆಯುವಂತಾಗಬೇಕು ರೈತ ಕೂಲಿಕಾರರ ರಾಜ್ಯವನ್ನು ಸ್ಥಾಪಿಸುವದೇ ಜಯಪ್ರಕಾಶರ ಧ್ಯೇಯವಾಗಿರುವದು. ಭಾರ ತವು ಸ್ವತಂತ್ರವಾದರೆ ತೀರಲಿಲ್ಲ. ನಾವು ನಿಜವಾಗಿ ರಾಮರಾಜ್ಯವನ್ನು ಕಟ್ಟಬೇಕಾಗಿದೆ. ಸಮಾಜದಲ್ಲಿಯ ಆರ್ಥಿಕ ಸಾಮ್ಯ ವೈಷಮ್ಯವನ್ನು ಹೊಡೆದು ಹಾಕಿ ವ್ಯಕ್ತಿಯ ಬೆಳವಣಿಗೆಗೆ ಅವಕಾಶವನ್ನೊದಗಿಸಿಕೊಡು ವದೇ ಸಮಾಜವಾದಿಗಳ ಗುರಿ ಅದಕ್ಕಾಗಿಯೇ ಜಯಪ್ರಕಾಶರು ದುಡಿಯು ತ್ತಿರುವರು.